ರಾಷ್ಟ್ರಪಿತ ಬಾಪೂಜಿಯವರ ೮೦ ನೇ
ಜಯಂತಿ ಉತ್ಸವದ ಸಂದರ್ಭದಲ್ಲಿ
'ಆಕಾಶವಾಣಿ'ಯಿಂದ ಪ್ರಸಾರಮಾಡಿದ
ಭಾಷಣ, ಕವನ, ನಾಟಕಗಳ ಸಂಗ್ರಹ.

ಸರ್ವೋದಯ, ೧೯೪೯

ಬೆಲೆ, ರೂ. ೧—೪

# ಬಾಪೂದರ್ಶನ

ಭಾಷಣ, ಕವನ, ನಾಟಕಗಳ ಸಂಗ್ರಹ





ಆಕಾಶವಾಣಿ ಪ್ರಕಟಣೆ

# ವಿಷಯಸೂಚಿಕೆ

(೭) ಗ್ರಾಮೋದ್ಧಾರ—ಖಾದಿ :



(೮) ರಾಜಕಾರಣ :



(೯) ಮಹಿಳೆಯರಿಗೆ :



## ಚಿತ್ರಗಳು



ನೌವಖಾಲಿ ಯಾತ್ರಿಕ!

"ನನಗೆ ರಾಜ್ಯ ಬೇಡ, ಸ್ವರ್ಗ ಬೇಡ, ಪುನರ್ಜನ್ಮವೂ ಬೇಡ. ದುಃಖಿತರ ಸಂಕಟ ನಿವಾರಣೆಯಾದರೆ ನನಗಷ್ಟೇ ಸಾಕು."—ಬಾಪೂ.

# ಪೂರ್ಣದೃಷ್ಟಿಗೆ ಗಾಂಧೀಜಿ

ಕೆ. ವಿ. ಪುಟ್ಟಪ್ಪ

ಇಂದು ಸಾಮಾನ್ಯ ಭಾರತೀಯನು ತನ್ನ ಪುಣ್ಯಭೂಮಿಯ ಇತಿಹಾಸದ ಯಾವ ಕಾಲವಿಭಾಗವನ್ನು ಅವನತಿಯ ಕಾಲವೆಂದೂ ಪತನದ ಕಾಲವೆಂದೂ ದಾಸ್ಯದ ಕಾಲವೆಂದೂ ಇಳಿಗಾಲವೆಂದೂ ಭಾವಿಸಿ ಹಾಗೆ ಕರೆಯುತ್ತಾನೆಯೊ ಆ ಕಾಲಮಾನವೆ ಒಳಹೊಕ್ಕು ಕಾಣಬಲ್ಲ ವಿಚಾರಮತಿಗೆ ಎಂತಹ ಶ್ರೀಮಂತತೆಯಿಂದ ರಂಜಿಸುತ್ತದೆ ಎಂದರೆ ಸಾಮಾನ್ಯನ ದೃಷ್ಟಿಗೂ ವಿಚಾರಮತಿಯ ದೃಷ್ಟಿಗೂ ರಾಜಿಗೆ ಅವಕಾಶವಿಲ್ಲವೆಂದೆ ಹೇಳಬೇಕಾಗುತ್ತದೆ. ಹಾಗೆ ರಾಜಿಗೆ ಅವಕಾಶವಿಲ್ಲದಿರುವುದಕ್ಕೆ ಕಾರಣ, ಆ ಎರಡು ದೃಷ್ಟಿಗಳೂ ಬೇರೆ ಬೇರೆ ಭೂಮಿಕೆಗಳ ಮೇಲೆ ನಿಂತು, ಭಿನ್ನ ಭಿನ್ನ ಪುರುಷಾರ್ಥಗಳನ್ನು ತಮ್ಮ ತಮ್ಮ ಮುಖ್ಯ ಲಕ್ಷ್ಯವಾಗಿಟ್ಟುಕೊಂಡಿರುವುದೆ. ರಾಜಕೀಯವೂ ಆರ್ಥಿಕವೂ ಆದ ಲೌಕಿಕ ದೃಷ್ಟಿಯಿಂದ ನೋಡಿದರೆ ಸಾಮಾನ್ಯನ ದೃಷ್ಟಿಗೆ ಸತ್ಯದ ಹೆಸರು ಸಲ್ಲುತ್ತದೆ. ಧಾರ್ಮಿಕವೂ ಆಧ್ಯಾತ್ಮಿಕವೂ ಆಗಿರುವ ಲೋಕೋತ್ತರ ದೃಷ್ಟಿಯಿಂದ ಸಮೀಕ್ಷಿಸಿದರೆ ವಿಚಾರಮತಿಯ ಇತ್ಯರ್ಥದಲ್ಲಿಯೆ ಸತ್ಯಕ್ಕೆ ಪಟ್ಟಾಭಿಷೇಕವಾಗುವಂತೆ ಅರ್ಥವಾಗುತ್ತದೆ.

ಸಾಮಾನ್ಯವಾಗಿ ಇತಿಹಾಸಕಾರನ ದೃಷ್ಟಿ ಲೋಕಧರ್ಮಿಯಾದದ್ದು. ನಮ್ಮಲ್ಲಿ ಪ್ರಚುರವಾಗಿರುವ ಇತಿಹಾಸ ರಚನಾ ವಿಧಾನವು ಪಾಶ್ಚಾತ್ಯರಿಂದ ಆಮದಾಗಿ ಬಂದದ್ದು ಎಂಬುದನ್ನು ಗಮನಿಸಿದರೆ ನಮ್ಮವರ ಚರಿತ್ರ ದೃಷ್ಟಿಯೂ ಲೌಕಿಕವಾದುದರಲ್ಲಿ ಆಶ್ಚರ್ಯವೇನೂ ಕಾಣುವುದಿಲ್ಲ. ಆದರೆ ವಿಶ್ವಸರ್ವಗ್ರಾಸಿಯೂ ವಿಶ್ವರೂಪದರ್ಶಿಯೂ ಆಗಿರುವ ಪೂರ್ಣದೃಷ್ಟಿಗೆ ಚರಿತ್ರಕಾರನ ಅಂಶದೃಷ್ಟಿ, ಆತನ ಮನೋಧರ್ಮಕ್ಕೂ ಆತನು ಕೈಗೊಂಡಿರುವ ಕಥಾರೀತಿಯ ಕರ್ಮಕ್ಕೂ ಅದು ಅನಿವಾರ್ಯವಾದುದಾದರೂ ಸಮರ್ಪಕವಾಗಿ ತೋರುವುದಿಲ್ಲ. ವಿಶ್ಲೇಷಣಾತ್ಮಕವಾದ ಆಧುನಿಕ ಶಾಸ್ತ್ರದೃಷ್ಟಿ ತನ್ನ ಪರಿಶೀಲನೆಗೆ ಒಳಗಾಗುವ ವಿಷಯವಲಯವನ್ನು ಇತರ ವಿಷಯವಲಯಗಳಿಂದ ಪ್ರತ್ಯೇಕಿಸಿ, ತನ್ನ ಜಿಜ್ಞಾಸೆಗೆ ಪ್ರಕೃತವಾದ ವಿಷಯವನ್ನು

ಅದೇ ಸರ್ವಸ್ವವೆಂಬಂತೆ ಪರಿಗಣಿಸುವುದು ಪದ್ಧತಿಯಾಗಿದೆ. ಈ ಪದ್ಧತಿ ಆಯಾ ವಿಷಯದ ಕೂಲಂಕಷವಾದ ಹೃದಯ ಪರಿಚಯಕ್ಕೆ ಬೇಕಾದ ಏಕಾಗ್ರತೆಯನ್ನು ಏಕಮುಖತೆಯನ್ನು ದಯಪಾಲಿಸುವುದು ನಿಜವಾದರೂ ಏಕಾಗ್ರತೆಯಿಂದ ಲಭಿಸುವ ಪ್ರಯೋಜನವನ್ನು ಏಕಮುಖತೆ ಅಸತ್ಯ ಅಥವ ಅರ್ಧಸತ್ಯ ಕಲುಷಿತವನ್ನಾಗಿ ಮಾಡುತ್ತದೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಆಧುನಿಕ ಇತಿಹಾಸ ಪದ್ಧತಿಗೂ ಈ ಟೀಕೆ ಬಹುಮಟ್ಟಿಗೆ ಸಲ್ಲುತ್ತದೆ.

ಚರಿತ್ರೆಯ ಗಮನವನ್ನೆಲ್ಲ ವಿಶೇಷವಾಗಿ ವ್ಯಾಪಿಸಿರುವುದು ರಾಜಕೀಯ, ರಾಜರು, ರಾಜ್ಯಗಳು, ಯುದ್ಧಗಳು, ಕೌಲುಗಳು, ಪಟ್ಟಾಭಿಷೇಕ, ಸಿಂಹಾಸನ ಚ್ಯುತಿ ಇತ್ಯಾದಿ. ಅವಕ್ಕೆ ಸಹಾಯಕವಾಗಿ ಸಾಮಾಜಿಕ ಮತ್ತು ಆರ್ಥಿಕ ವ್ಯಾಪಾರಗಳನ್ನು ಉಪಯೋಗಿಸುತ್ತದೆ. ಒಮ್ಮೊಮ್ಮೆ ಧಾರ್ಮಿಕದ ಅಂಶಗಳಲ್ಲಿ ಒಂದಾದ ಮತಗಳನ್ನೂ ಮತಾಂದೋಲನಗಳನ್ನೂ ಅವುಗಳಲ್ಲಿರಬಹುದಾದ ಐತಿಹಾಸಿಕಾಂಶಗಳಿಗಾಗಿ ಪರಿಭಾವಿಸುತ್ತದೆ. ನಾಗರಿಕತೆ ಮತ್ತು ಸಂಸ್ಕೃತಿಗಳ ಕಡೆಗೂ ಆಗಾಗ್ಗೆ ಅದರ ಕೃಪಾವಲೋಕನ ಬೀಳುತ್ತದೆ. ಆದರೆ ಪರಮಪುರುಷಾರ್ಥ ಲಕ್ಷಣವಾದ ಆಧ್ಯಾತ್ಮಿಕ ಜ್ಯೋತಿ ಅದಕ್ಕೆ ಅಲಕ್ಷಿತ. ಏಕೆಂದರೆ ಆಧ್ಯಾತ್ಮಿಕ ವ್ಯಾಪಾರ "ಐತಿಹಾಸಿಕ ಘಟನೆ"ಯಾಗುವಷ್ಟು ಸ್ಥೂಲವಾಗಿರುವುದಿಲ್ಲ, ಮುಷ್ಟಿಗ್ರಾಹ್ಯವಾಗಿರುವುದಿಲ್ಲ. ಅದು ಕಾಲದೇಶಗಳ ಚೌಕಟ್ಟಿನಲ್ಲಿ ಸಂಭವಿಸಿದರೂ ಸ್ವರೂಪತಃ ಕಾಲದೇಶಗಳಿಗೆ ಅತೀತವಾದದ್ದು. ಕಾಲದೇಶ ವ್ಯಾಪಾರಗಳಲ್ಲಿ ವ್ಯವಹರಿಸುವ ಇತಿಹಾಸ ಅವುಗಳಿಗೆ ಅತೀತವಾಗಿರುವುದನ್ನೆ ಮುಖ್ಯ ಲಕ್ಷಣವಾಗುಳ್ಳ ಆಧ್ಯಾತ್ಮಿಕವನ್ನು ಅಲಕ್ಷಿಸಿದರೆ ಅದು ನೈಸರ್ಗಿಕವೆಂದೆ ಭಾವಿಸಬೇಕಾಗುತ್ತದೆ.

ಹಾಗೆ ಭಾವಿಸಿ ಇತಿಹಾಸಕಾರನಿಗೆ ಗೌರವ ತೋರಿಸಲು ನಾವು ಪ್ರಯತ್ನಿಸಿದರೂ ಅವನ ಅಂಶ ದೃಷ್ಟಿಯ 'ಚರಿತ್ರೆ' ಪೂರ್ಣದೃಷ್ಟಿಗೆ ಎಂದೂ ಸರ್ವಮಾನ್ಯವಾಗಲಾರದು. ಏಕೆಂದರೆ ಪೂರ್ಣದೃಷ್ಟಿ ಸೃಷ್ಟಿ ಸಮಸ್ತದ ತಾತ್ಪರ್ಯವನ್ನು ತನ್ನ ಚಿರಭಿತ್ತಿಯನ್ನಾಗಿಟ್ಟುಕೊಂಡು ಲೋಕವ್ಯಾಪಾರಗಳ ಅರ್ಥವನ್ನು, ಎಂದರೆ ಕಾರಣ ಉದ್ದೇಶ ಮತ್ತು ಪ್ರಯೋಜನಾತ್ಮಕವಾದ ಅವುಗಳ ವಿಕಾಸಕ್ರಮವನ್ನು ಗ್ರಹಿಸಲು ಧ್ಯಾನಿಯಾಗುತ್ತದೆ. ಆದ್ದರಿಂದ ಪೂರ್ಣದೃಷ್ಟಿ ಪ್ರಪಂಚದ ರಾಜಕೀಯ ಸಾಮಾಜಿಕ ಆರ್ಥಿಕ ಮತ್ತು ಧಾರ್ಮಿಕವಾದ ವ್ಯಾಪಾರಗಳನ್ನೂ ಆಂದೋಲನಗಳನ್ನೂ ಸೃಷ್ಟಿಯ ಪರಮ ತಾತ್ಪರ್ಯದ ವ್ಯಾಖ್ಯಾನ ವೇದಿಕೆಯ ಮೇಲೆ ನಿಲ್ಲಿಸಿ ಅವುಗಳ ಸಾಕ್ಷ್ಯವನ್ನು ಸಂಗ್ರಹಿಸುತ್ತದೆ. ರಾಜಕೀಯದ ವಿಚಾರಣೆಯನ್ನು ರಾಜ

ಕೀಯವೆ ನಡಸಲು ಅದು ಒಪ್ಪುವುದಿಲ್ಲ. ಆರ್ಥಿಕ ಮಾತ್ರ ದೃಷ್ಟಿಯ ಅರ್ಥ ಶಾಸ್ತ್ರಕ್ಕೆ ಆರ್ಥಿಕಾಂದೋಲನಗಳ ಅರ್ಥನಿರ್ಣಯ ಮಾಡಲು ಜಡುವುದಿಲ್ಲ. ಎಲ್ಲ ವ್ಯಾಪಾರಗಳನ್ನೂ ಪರಮ ತಾತ್ಪರ್ಯವೆ ಇಚ್ಛಿಸುತ್ತದೆ; ಆದ್ದರಿಂದಲೆ ಎಲ್ಲ ವ್ಯಾಪಾರಗಳ ಅರ್ಥವನ್ನೂ ಪರಮ ತಾತ್ಪರ್ಯವೆ ಸಮರ್ಥಿಸಬೇಕಾಗು ತ್ತದೆ; ಏಕೆಂದರೆ, ಎಲ್ಲ ವ್ಯಾಪಾರಗಳ ಅರ್ಥವೂ ಪುರುಷಾರ್ಥವೂ ಪರಮ ತಾತ್ಪರ್ಯದಿಂದಲೆ ಸಾರ್ಥಕವಾಗುತ್ತವೆ.

ಭರತಖಂಡದ ಬದುಕಿನಲ್ಲಿ ಸ್ವಾತಂತ್ರ್ಯೋದಯಕ್ಕೆ ಪೂರ್ವದ ಒಂದೂವರೆ ಶತಮಾನವು ನಮ್ಮ ರಾಷ್ಟ್ರದ ಇಳಿಗಾಲದ ಯುಗವೆಂದು ಸಾಮಾನ್ಯವಾಗಿ ಭಾವಿಸುತ್ತೇವೆ. ರಾಜಕೀಯದಲ್ಲಿ ದಾಸ್ಯ, ಆರ್ಥಿಕದಲ್ಲಿ ದಾರಿದ್ರ್ಯ, ಸಾಮಾಜಿಕದಲ್ಲಿ ಛಿದ್ರತೆ, ಧಾರ್ಮಿಕದಲ್ಲಿ ಕ್ಷುದ್ರತೆ—ಎಂಬೆಲ್ಲ ವರ್ಣನೆಗೆ ಪಕ್ಕಾಗುವ ಆ ಕಾಲಕ್ಕೆ ಇಳಿಗಾಲವೆಂದು ಹೆಸರಿಟ್ಟರೆ ಅದರಲ್ಲಿ ತಪ್ಪೇನು? ಹೌದು; ಲೋಕನಿಷ್ಠವಾದ ಮನೋಧರ್ಮಕ್ಕೆ ಅದರಲ್ಲಿ ತಪ್ಪೇನೂ ಕಾಣುವುದಿಲ್ಲ. ಆದರೆ ವೇದನಿಷ್ಠವಾದ, ಎಂದರೆ ಆತ್ಮಶ್ರೀ ನಿಷ್ಠವಾದ, ಪರಮ ತಾತ್ಪರ್ಯಾರ್ಥದ ಪೂರ್ಣದೃಷ್ಟಿಗೆ ಅದು ವ್ಯಾವಹಾರಿಕ ಮಾತ್ರವಾದ ಮಿಥ್ಯಾದೃಷ್ಟಿ.

ಏಕೆಂದರೆ, ಹತ್ತೊಂಬತ್ತನೆಯ ಶತಮಾನ ಮತ್ತು ಇಪ್ಪತ್ತನೆಯ ಶತಮಾನದ ಪೂರ್ವ ಭಾಗ ಇವನ್ನೊಳಗೊಂಡ ಆ ಕಾಲಮಾನದಲ್ಲಿ ನಮ್ಮ ದೇಶದಲ್ಲಿ ಗೋಚರವಾದ ಆತ್ಮಶ್ರೀಗೆ ಸಮಾನ ತೇಜಸ್ಸಿನ ಆತ್ಮಶ್ರೀ ಬೇರೆ ಇನ್ನಾವ ದೇಶದಲ್ಲಿಯೂ ಆವಿರ್ಭೂತವಾಗಲಿಲ್ಲ ಎಂದು ಹಾಗೆ ಇತ್ಯರ್ಥ ಹೇಳಲು ಸಮರ್ಥರೂ ವಿಖ್ಯಾತರೂ ಆದ ವಿದೇಶೀಯ ಮಹದ್ವ್ಯಕ್ತಿಗಳೇ ಒಪ್ಪಿಕೊಂಡಿದ್ದಾರೆ. ರಾಜಕೀಯಾದಿ ಲೌಕಿಕ ಭೂಮಿಕೆಗಳಲ್ಲಿ ನಾವು ಗಳಿಸಿದ ಅಸದೃಶವಾದ ವಿಜಯ ಪರಂಪರೆಗಳಿಗೂ ಆ ಆಧ್ಯಾತ್ಮಿಕ ತಪಶ್ಶಕ್ತಿಯೇ ಪ್ರಚೋದಕವೂ ಸಾಧಕವೂ ಆಯಿತೆಂಬುದರಲ್ಲಿ ಸಂದೇಹವಿಲ್ಲ. ಆ ಕಾಲಮಾನದಲ್ಲಿ ಸಂಭವಿಸಿದ ಹಿಂದೂಧರ್ಮದ ಸರ್ವೋದಯದ ದಿವ್ಯಕಥೆ ಎಂತಹ ಉದಾಸೀನನಿಗೂ ರೋಮಾಂಚನಕಾರಿಯಾಗುವಷ್ಟು ಅದ್ಭುತವಾಗಿದೆ. ವಿವರಗಳಿಗೆ ಹೋಗದೆ ನಮ್ಮ ದೃಷ್ಟಿ ವಿಹಂಗಮವಾಗಿ ವೀಕ್ಷಿಸಿದರೂ ಸಾಕು, ಭರತಖಂಡದ ಬೃಹದ್ ವಿಸ್ತೀರ್ಣದಲ್ಲಿ, ದಿಕ್ಕು ದಿಕ್ಕುಗಳಲ್ಲಿ, ಕಣ್ಣು ಹರಿದತ್ತ ಆತ್ಮಶ್ರೀಯ ಜ್ಯೋತಿಸ್ಸ್ತೂಪಗಳು ಮಸಂಗೊಳಿಸಿ, ಅವಿರಾಮ ಶಿಖರದ ಅಗ್ನಿಗೋಪುರಗಳಂತೆ ರಾರಾಜಿಸುತ್ತವೆ. ರಾಮಮೋಹನರಾಯ, ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಋಷಿ ದಯಾನಂದ ಸರಸ್ವತಿ,

ರವೀಂದ್ರನಾಥ ಠಾಕೂರ, ಶ್ರೀ ರಮಣಮಹರ್ಷಿ, ಶ್ರೀ ಅರವಿಂದರು, ಮಹಾತ್ಮಾ ಗಾಂಧೀಜಿ—ಈ ಒಂದೊಂದು ಹೆಸರಿನ ಹಿಂದೆ ಎಂತಹ ಉಸಿರು ಸ್ಪಂದಿಸುತ್ತದೆ ಎಂಬುದನ್ನು ಅರಿತು ಅನುಭವಿಸಿದರೆ ನಾವು ಮೇಲೆ ಹೇಳಿದ ಮಾತಿನ ಸತ್ಯಾಂಶ ಸುಸಂವೇದ್ಯವಾಗುತ್ತದೆ.

ನಮ್ಮ ದೇಶದ ಸ್ವಾತಂತ್ರ್ಯ ಸಾಧನೆಯ ಯುಗದ ಪ್ರತ್ಯುಕ್ಷೆಯಲ್ಲಿಯೆ ಸ್ವಾಮಿ ವಿವೇಕಾನಂದರ ಕ್ರಾಂತದರ್ಶಿಯಾದ ಸಿಡಿಲವೀಣೆ ಹೀಗೆಂದು ಗುಡುಗಿದೆ :

"ಓ ನನ್ನ ಭರತಮಾತೆ, ಓ ನನ್ನ ಭಾರತೀಯ ಭ್ರಾತೃಗಳಿರಾ, ನಿದ್ದೆಯಿಂದೆದ್ದೇಳಿ! ನವೋದಯವಾಗುತ್ತಿದೆ; ಕಣ್ದೆರೆದು ನೋಡಿ! ಅದೋ! ಅದೋ!"

"ಸುದೀರ್ಘರಾತ್ರಿ ಕಡೆಗಿಂದು ಕೊನೆಗಾಣುತ್ತದೆ . . . ಶವದಂತೆ ಬಿದ್ದಿದ್ದ ಶರೀರವಿಂದು ಸಪ್ರಾಣವಾಗುತ್ತಿದೆ. ಅದೋ ಕಿವಿಗೊಡಿ : ತೂರ್ಯವಾಣಿಯೊಂದು ಕೇಳಿ ಬರುತ್ತಿದೆ : ಬಹು ಪುರಾತನ ಕಾಲದ ಇತಿಹಾಸಗರ್ಭದಿಂದ ಹೊಮ್ಮಿ, ಪರ್ವತ ಪರ್ವತ ಶಿಖರಗಳಿಂದ ಚಿಮ್ಮಿ, ಅರಣ್ಯಾರಣ್ಯ ಕಂದರ ಕಂದರಗಳಲ್ಲಿ ಸಂಚರಿಸಿ, ಬರಬರುತ್ತ ಪ್ರಬಲವಾಗಿ, ಬಂದಂತೆಲ್ಲ ಅಪ್ರತಿಹತವಾಗಿ, ನಮ್ಮೀ ಪುಣ್ಯಭೂಮಿಯನ್ನು ನಿದ್ದೆಯಿಂದೊದೆದೆಬ್ಬಿಸಿ, ಜ್ಞಾನ ಭಕ್ತಿ ಕರ್ಮ ವೈರಾಗ್ಯ ಸೇವಾತತ್ತ್ವಗಳನ್ನು ಉಚ್ಚಕಂಠದಿಂದ ಸಾರುವ ತೂರ್ಯವಾಣಿಯೊಂದು ಕೇಳಿಬರುತ್ತಿದೆ. ಹಿಮಾಲಯಗಳಿಂದ ಬೀಸಿಬರುವ ಪುಣ್ಯ ಸಮೀರಣನಂತೆ ನಿರ್ಜೀವವಾದಂತಿದ್ದ ಅಸ್ಥಿಮಾಂಸಗಳಿಗೆ ಜೀವದಾನಮಾಡುತ್ತಿದೆ : ಜಡನಿದ್ದೆಯನ್ನು ಜಡದೆಬ್ಬಿಸುತ್ತಿದೆ; ಕಾರ್ಯೋತ್ಸಾಹ ಧೈರ್ಯಸ್ಥೈರ್ಯಗಳನ್ನು ಉದ್ರೇಕಿಸುತ್ತಿದೆ. ಕುರುಡರಿಗೆ ಕಾಣದು; ಮೂರ್ಖರಿಗೆ ತಿಳಿಯದು. ನಮ್ಮೀ ಭರತ ಭೂಮಿ ಯುಗಯುಗಗಳ ನಿದ್ರೆಯಿಂದ ಮೇಲೇಳುತ್ತಿದೆ. ಆಕೆಯನ್ನು ಇನ್ನಾರೂ ತಡೆಯಬಲ್ಲವರಿಲ್ಲ; ಇನ್ನಾಕೆ ನಿದ್ದೆ ಮಾಡುವುದಿಲ್ಲ. ಯಾವ ಶಕ್ತಿಯೂ ಆಕೆಯನ್ನು ಬಗ್ಗಿಸಲಾರದು. ಏಕೆಂದರೆ, ಅದೋ ನೋಡಿ, ಮಹಾಕಾಳಿ ಮತ್ತೊಮ್ಮೆ ಎಚ್ಚತ್ತು ಮೈಕೊಡವಿ ಉಸಿರೆಳೆದು ನಿಲ್ಲುತ್ತಿದ್ದಾಳೆ! . . ."

"ಯಾವ ಶಕ್ತಿಯ ಉನ್ಮೇಷಮಾತ್ರದಿಂದಲೆ ದಿಗ್ದಿಗಂತವ್ಯಾಪಿಯಾದ ಪ್ರತಿಧ್ವನಿಯಿಂದ ಜಗತ್ತು ಜಾಗ್ರತವಾಗುತ್ತಿರುವುದೋ ಆ ಶಕ್ತಿಯ ಪೂರ್ಣತ್ವವನ್ನು ಭಾವಿಸು, ಅನುಭವಿಸು. ವೃಥಾ ಸಂದೇಹಬೇಡ; ದುರ್ಬಲತೆ ಬೇಡ. ದಾಸಜಾತಿ ಸುಲಭವಾದ ಈರ್ಷ್ಯಾದ್ವೇಷಗಳನ್ನು ದೂರಮಾಡಿ—ಈ ಮಹಾ ಯುಗಚಕ್ರಪರಿವರ್ತನೆಯ ಸಹಾಯಾರ್ಥವಾಗಿ ಹೆಗಲುಕೊಟ್ಟುನಿಲ್ಲು; ಸೊಂಟಕಟ್ಟಿನಿಲ್ಲು; ಧೀರನಾಗಿನಿಲ್ಲು!'

ಶ್ರೀ ವಿವೇಕಾನಂದರಂತೆಯೆ ಮಹಾಯೋಗೀಂದ್ರ ಶ್ರೀ ಅರವಿಂದರೂ ಅಂದಿನ ತಮ್ಮ ರಾಜಕೀಯಾಂದೋಲನದ ಮಧ್ಯದಲ್ಲಿಯೆ ಈ ಸತ್ಯವನ್ನು ಅನುಭವಿಸಿ ಕಂಡು ಭರತಖಂಡದ ಜೀವಿತೋದ್ದೇಶವನ್ನು ಕುರಿತು ಹೀಗೆಂದು ಭವಿಷ್ಯ ನುಡಿದಿದ್ದಾರೆ:

"ನರನಲ್ಲಿ ನಾರಾಯಣ, ನಾರಾಯಣನಲ್ಲಿ ನರ—ಎಂಬುದೇ ಧ್ಯೇಯ. ಆ ಧ್ಯೇಯದ ಸಾಧನೆ ಮತ್ತು ಲೋಕಕ್ಕೆ ಅದರ ಬೋಧನೆ—ಇವೇ ಭರತವರ್ಷದ ಜೀವಿತೋದ್ದೇಶ. ಇತರ ಜನಾಂಗಗಳಿಗಿಲ್ಲದ ರಹಸ್ಯ ಶಕ್ತಿಯೊಂದು ಆಕೆಗಿದೆ. ಆಕೆಗಿಂದು ಬೇಕಾಗಿರುವುದು ಆ ಶ್ರದ್ಧೆಯ ಉನ್ಮೀಲನ ಮತ್ತು ಆ ಇಚ್ಛಾಶಕ್ತಿಯ ಉದ್ಬೋಧನ. ಆಕೆ ಕೈಕೊಂಡ ಯುಗಯುಗಗಳ ಶಿಕ್ಷಾತಪಸ್ಯೆಯ ಗುರಿ ಇಂದು ಬಳಿ ಸಾರುತ್ತಿದೆ. ಪೂರ್ವರೋದೋಂತದಲ್ಲಿ ಮಹಾ ಜ್ಯೋತಿಯೊಂದು ಮೂಡಿ ಬರುತ್ತಿದೆ. ಅದರ ರಶ್ಮಿರಾಯಭಾರಿಗಳಾಗಲೆ ದಿಗಂತದಲ್ಲಿ ದೃಗ್ಗೋಚರನಾಗುತ್ತಿದ್ದಾರೆ. ಅದೇ ಕಾರಣ, ಭರತಖಂಡದ ಪುನರುತ್ಥಾನಕ್ಕೆ ; ಅದೇ ಸಾಕ್ಷಿ, ವಿಶ್ವಶಕ್ತಿ ಆಕೆಯ ಶ್ವಾಸಕೋಶಗಳಿಗೆ ಮತ್ತೊಮ್ಮೆ ಪ್ರಾಣವಾಯುವನ್ನು ಊದುತ್ತಿದ್ದಾಳೆ ಎಂಬುದಕ್ಕೆ. ಅದೇ ಪ್ರೇರಣೆಯಿಂದಲೆ ಆಕೆಯ ವಿಮೋಚನಕ್ಕಾಗಿ ಮಹದ್ವ್ಯಕ್ತಿಗಳು ಈಗಾಗಲೆ ಕರ್ಮನಿರತರಾಗಿದ್ದಾರೆ. ಆದಕಾರಣವೆ ಆಕೆಯ ಸಂತಾನರ ಹೃದಯ ವಲ್ಮೀಕಗಳಲ್ಲಿ ಪರಿವರ್ತನೆಯ ಮಹಾಶೇಷನು ಹಠಾತ್ತನೆ ಹೆಡೆಯೆತ್ತುತ್ತಿದ್ದಾನೆ."

ಯಾವ ಜಾಗ್ರತಿಯ ಪ್ರಪ್ರಥಮ ಪದನ್ಯಾಸವು ರಾಜಕೀಯ ರೂಪದಲ್ಲಿ ವ್ಯೈದೋರಿತೋ ಅದು ತುತ್ತ ತುದಿಗೆ ಆಧ್ಯಾತ್ಮಿಕ ತೇಜಸ್ಸಿನಲ್ಲಿ ಪರ್ಯವಸಾನ ಹೊಂದಿ ಕೃತಕೃತ್ಯವಾಗುತ್ತದೆ. ಭರತಮಾತೆಯ ಚೈತನ್ಯ ಆಕೆಯಲ್ಲಿ ಇನ್ನೂ ಅಕ್ಷಯವಾಗಿದೆ. ಜಗತ್ತು ತನ್ನ ವಿಮೋಚನದ ಸಂದೇಶವನ್ನು ಭರತಖಂಡದಿಂದಲೆ ಸ್ವೀಕರಿಸಿ ಉದ್ಧಾರವಾಗುತ್ತದೆ.

ಇಬ್ಬರು ಮಹಾಪುರುಷರೂ ಕ್ರಾಂತದರ್ಶಿಗಳಾಗಿ ಭವಿಷ್ಯ ನುಡಿದಿದ್ದಾರೆ. ಅದು ಇಂದು ಬಹುಮಟ್ಟಿಗೆ ಸಫಲವಾಗಿದೆ; ಸಫಲವಾಗುತ್ತಲೂ ಇದೆ. ಅಂತಹ ಸಫಲತೆಯ ಸಿದ್ಧಿಗಾಗಿ ಕಂಕಣಬದ್ಧನಾಗಿ ದುಡಿದು ನುಡಿದ ಮಹಾಪುರುಷನೊಬ್ಬನ ವ್ಯಷ್ಟಿಶಕ್ತಿಯನ್ನು ಸಮಷ್ಟಿಶಕ್ತಿಯ ಹಿನ್ನೆಲೆಯಲ್ಲಿಟ್ಟು ನೋಡುವ ಪ್ರಯತ್ನವನ್ನೇ ನಾವು 'ಪೂರ್ಣದೃಷ್ಟಿಗೆ ಗಾಂಧೀಜಿ' ಎಂದು ಕರೆದಿದ್ದೇವೆ.

ಗಾಂಧೀಜಿ ಈಗ ತೀರಿಕೊಂಡಿದ್ದಾರೆ. ಅವರ ಐಹಿಕ ಜೀವನಯಾತ್ರೆಯ ದೈಹಿಕರೂಪ ಕೊನೆಗಂಡಿದೆ. ಅವರ ಬದುಕು ನಮಗಿಂದು ಚಿತ್ರಕಾರನು ಪೂರೈಸಿದ ಚಿತ್ರದಂತಿದೆ. ಅದನ್ನು ಒಟ್ಟಿಗೆ ನೋಡಬಹುದು. ತಿರುಗಿಸಿ ತಿರುಗಿಸಿ, ಬೇಕಾದಕಡೆ ನಿಂತು, ಬೇಕಾದ ಬೆಳಕು ಬಿಟ್ಟು ನೋಡಬಹುದು. ಅವರು ತೀರಿದ ತರುಣದಲ್ಲಿಯೆ ಇಷ್ಟು ಬೇಗನೆ ನಿಷ್ಪಕ್ಷವಾಗಿ ನೋಡುತ್ತೇನೆಂದು ಹೇಳುವುದು ಪ್ರಾಯಶಃ ಸಾಹಸದ ಮಾತಾದೀತು. ಅವರು ತೀರಿಕೊಂಡರೂ ಇನ್ನೂ ನಮಗೆ ಬಹಳ ಹತ್ತಿರವಿದ್ದಾರೆ. ಹಿಮಾಲಯದ ಹತ್ತಿರ ನಿಂತು ನೋಡಿದರೆ ಅದು ಬೃಹದಾಕಾಶವನ್ನೆಲ್ಲ ವ್ಯಾಪಿಸಿದಂತೆ

ತೋರುವುದು ಸಹಜ. ದೂರ ಸರಿದರೆ ಮಾತ್ರ ಗೊತ್ತಾಗುತ್ತದೆ—ಅದರ ಇತಿ, ಮಿತಿ, ವಿಸ್ತಾರ, ಔನ್ನತ್ಯ; ಇತರ ಗಿರಿಗಳೊಡನೆ ಅದಕ್ಕಿರುವ ಸಂಬಂಧ; ಇತರ ಪರ್ವತಗಳ ಸಮುದಾಯದಲ್ಲಿ ಅದಕ್ಕಿರುವ ಸ್ಥಾನ, ಮಾನ. ದೂರ ಸರಿಯುವುದರಿಂದ ನಮಗೆ ನಷ್ಟವಾದಂತೆ ತೋರಬಹುದು; ಮೊದಲು ಅದಕ್ಕಿದ್ದ ಬೃಹತ್ತು ಕಡಮೆಯಾಗುತ್ತದೆ; ಆಕಾಶವನ್ನೆಲ್ಲ ತುಂಬಿರುವಂತೆ ತೋರುತ್ತಿದ್ದ ಅದು ಕಿರಿದಾಗಿ ಕಾಣತೊಡಗುತ್ತದೆ; ಅದರ ಸರ್ವಸ್ವತೆಗೆ ಚ್ಯುತಿಯೊದಗಿ ಪರ್ವತಶ್ರೇಣಿಗಳಲ್ಲಿ ಅದೂ ಒಂದು ಎಂಬರಿವು ಮೂಡುತ್ತದೆ; ಅದರ ಎತ್ತರಕ್ಕೆ ಇತರ ಕಿರುಬೆಟ್ಟಗಳು ಎಷ್ಟರ ಮಟ್ಟಿಗೆ ಆಧಾರವಾಗಿವೆ ಎಂಬಂಶ ಸ್ಫುರಿಸುತ್ತದೆ. ಹೀಗಾದರೂ ಅದು ನಿಜವಾಗಿಯೂ ನಮಗೊದಗುವ ನಷ್ಟವಲ್ಲ. ಅದನ್ನು ನಷ್ಟವೆಂದು ಭಾವಿಸುವುದು ಮೋಹಮೂಲವಾದ ಭ್ರಾಂತಿಯನ್ನೇ ಪ್ರೀತಿಸುವ ಒಂದು ಮನೋದೌರ್ಬಲ್ಯವಾದೀತು. ಸತ್ಯ ಲಾಭ ಎಂದಿಗೂ ನಷ್ಟವಲ್ಲ, ತತ್ಕಾಲದಲ್ಲಿ ಹಾಗೆ ತೋರಿದರೂ. ಏಕೆಂದರೆ ಹಿಮಾಚಲದ ನಿಜವಾದ ಬೃಹತ್ತು ನಮ್ಮ ಸ್ಥಾನವ್ಯತ್ಯಾಸದಿಂದ ಸ್ವರೂಪತಃ ಹಿಗ್ಗುವುದೂ ಇಲ್ಲ, ಕುಗ್ಗುವುದೂ ಇಲ್ಲ. ಅದು ಸುಸ್ಥಿರ. ಬದಲಾಗಿ ನಮಗೊದಗುವ ಲಾಭವೆಂದರೆ, ಹಿಮಾಲಯಕ್ಕೆ ಆಧಾರವಾದ ಪೃಥ್ವಿಯ ವಿಪುಲತರ ವಿಸ್ತೀರ್ಣವೂ ಎಲ್ಲವನ್ನೂ ಒಳಕೊಂಡಿರುವ ಅಪಾರವಾದ ವ್ಯೋಮಮಂಡಲದ ಮಹತ್ತರವಾದ ಅನಂತತೆಯೂ ಅನುಭವ ಗೋಚರವಾಗಿ, ನಮ್ಮ ಚೇತನ ವಿರಾಟ್ ಸಂಗಿಯಾಗುತ್ತದೆ. ನಮ್ಮ ಅಹಂಕಾರ ಮತ್ತು ಮಮಕಾರ ಪೂರ್ಣವಾದ 'ಅಲ್ಪ'ದೃಷ್ಟಿಗೆ ಅತ್ಯಂತ ಹಿರಿದಾಗಿ ತೋರುತ್ತಿದ್ದುದೂ ಕೂಡ ಅದರ ನಿಜವಾದ ಹಿರಿತನಕ್ಕೆ ಕುಂದುಬರದ ರೀತಿಯಲ್ಲಿ ಕಿರಿದಾಗಿ ತೋರಿ, ಎಲ್ಲವನ್ನೂ ತನ್ನ ಇಚ್ಛಾಮಾತ್ರದಿಂದ ಹೊರಹೊಮ್ಮಿಸಿ ಅನಿರ್ವಚನೀಯವಾದ ತನ್ನ ಇಚ್ಛಾ ಸೂತ್ರದಿಂದ ಲೀಲಾ ಜಗತ್ತನ್ನು ನಡಸುತ್ತಿರುವ ಭಗವನ್ನಿತ್ಯದ ಭೂಮತೆ ಭವ್ಯತೆಗಳು ಚೇತಃಸ್ಪರ್ಶಿಗಳಾಗಿ ನಮ್ಮನ್ನು ಪ್ರವೇಶಿಸುತ್ತದೆ. ಹೆಮ್ಮೆ ಹೆಡೆಮುಚ್ಚಿ, ಅಹಂಭಾವ, ಸಾಷ್ಟಾಂಗ ದಂಡಪ್ರಣಾಮ ಮಾಡಿ, ಜೀವ ವಿನಯಶೀಲವಾಗುತ್ತದೆ. ಅಂತಹ ಅನುಭವಕ್ಕಿಂತಲೂ ಹೆಚ್ಚಿನ ಲಾಭವಾಗಲಿ, ದಿವ್ಯತರವಾದ ಪ್ರಯೋಜನವಾಗಲಿ ಬೇರೆ ಏನಿದೆ?

ಗಾಂಧೀಜಿಯ ಜೀವನವನ್ನು ಚರಿತ್ರೆಯ ರೂಪದಲ್ಲಿ ಒಕ್ಕಣಿಸುವುದು ನಮ್ಮ ಉದ್ದೇಶವಲ್ಲ. ಸಂಕ್ಷೇಪವಾಗಿಯಾದರೂ ಅದನ್ನು ಹೇಳುವುದು ಇಲ್ಲಿ ಅನಾವಶ್ಯಕ. ಅದರ ರೂಪುರೇಖೆಗಳು ಮಾತ್ರವಲ್ಲ ವಿವರಗಳೂ ಕೂಡ ಮಕ್ಕಳು

ಮುದುಕರಾದಿಯಾಗಿ ಈಗಾಗಲೆ ತಕ್ಕಮಟ್ಟಿಗೆ ಎಲ್ಲರಿಗೂ ತಿಳಿದಿವೆ. ಅದರ ಜೀವನ ಪ್ರತಿಮೆಯನ್ನು ವಿಶೇಷವಾಗಿ ಭರತಖಂಡಕ್ಕೆ ಅನ್ವಯಿಸುವಂತೆ ಜಗಜ್ಜೀವನ ರಂಗಭಿತ್ತಿಯಲ್ಲಿಟ್ಟು ಸಮೀಕ್ಷಿಸುವುದೇ ನಮ್ಮ ಪ್ರಕೃತ ಸಂಕಲ್ಪ.

ಶ್ರೀ ಮೋಹನದಾಸ ಕರಮಚಂದ ಗಾಂಧಿ ಗುಜರಾತು ಪ್ರಾಂತದ ಕಾಠಿವಾಡ ಸಂಸ್ಥಾನಗಳಲ್ಲಿ ಒಂದಾಗಿದ್ದ ಪೋರಬಂದರು ಸಂಸ್ಥಾನದ ದಿವಾನರ ಮಗನಾಗಿ ಕ್ರಿ.ಶ. ೧೮೬೯ ನೆಯ ಅಕ್ಟೋಬರ ೨ ನೆಯ ದಿನ ಸಾಮಾನ್ಯರೀತಿಯಲ್ಲಿ ಸಾಮಾನ್ಯರಂತೆ ಭೂಪ್ರಜೆಯಾಗಿ ಅವತರಿಸಿದರು. ಜೈನರ ಕಾವ್ಯಗಳಲ್ಲಿ ತೀರ್ಥಂಕರನಾಗುವವನು ಜನ್ಮವೆತ್ತುವ ಸಂದರ್ಭದಲ್ಲಿ ವರ್ಣಿತವಾಗುವಂತೆ ಇಲ್ಲಿ ಗರ್ಭಶೋಧನ ಜನ್ಮಾಭಿಷೇಕ ಇಂದ್ರನ ಆನಂದ ನೃತ್ಯ ಇತ್ಯಾದಿಗಳೇನೂ ನಡೆಯಲಿಲ್ಲ. ಸೂಕ್ಷ್ಮಲೋಕದ ಭಗವತ್ ಕವಿಯ ಕಾವ್ಯಸತ್ತೆಯಲ್ಲಿ ನಡೆದವೋ ಬಿಟ್ಟವೋ ಗದ್ಯಲೇಖಕನಿಗೆ ಅದೆಲ್ಲ ಅಪ್ರಕೃತ. ಅಂತೂ ಅವರೂ ಹುಟ್ಟಿದರು.

ಇತರ ಬಾಲಕರಂತೆ ಬೆಳೆದರು, ಶಾಲೆಗೆ ಹೋದರು, ಇತರರಂತೆಯೆ ವಿದ್ಯಾರ್ಜನೆ ಮಾಡಿದರು; ಅಂದಿನ ಕಾಲಸ್ಥಿತಿಗೆ ವಶರಾಗಿ ಇತರ ಅನೇಕರಂತೆ ವಿದ್ಯಾರ್ಜನೆಗಾಗಿ ವಿದೇಶಕ್ಕೆ ಹೋದರು; ಅದನ್ನು ಪೂರೈಸಿಕೊಂಡು ಸ್ವದೇಶಕ್ಕೆ ಹಿಂತಿರುಗಿದರು; ವಕೀಲಿವೃತ್ತಿಗೆ ಸೇರಿ ದುಡಿಯಲಾರಂಭಿಸಿದರು. ಪ್ರಾಸಂಗಿಕವಾಗಿ ಒದಗಿದ ಅವಕಾಶ ಅವರನ್ನು ದಕ್ಷಿಣ ಆಫ್ರಿಕಕ್ಕೆ ಕೊಂಡೊಯ್ದಿತು. ಅಲ್ಲಿ ನಡೆದ ಒಂದು ದಾರುಣವಾದ ಅನುಭವ ಅವರನ್ನು ದೀಕ್ಷಿತರನ್ನಾಗಿ ಪರಿವರ್ತಿಸಿತು. ಅಲ್ಲಿ ಸತ್ಯಾಗ್ರಹದ ಪ್ರಯೋಗ ನಡೆಸಿ ಜಯಶೀಲರಾಗಿ ಭಾರತಕ್ಕೆ ಹಿಂತಿರುಗಿದರು. ವಿಧಿ ಇಲ್ಲಿಯೂ ಅವರಿಗಾಗಿ ರಂಗವನ್ನು ಸವೆದು ಸಿದ್ಧಗೊಳಿಸಿತ್ತು. ನಿರಾಡಂಬರವಾಗಿ ಒಂದು ಮೂಲೆಯಿಂದ ರಂಗಪ್ರವೇಶಮಾಡಿದರು. ದೃಶ್ಯದಿಂದ ದೃಶ್ಯಕ್ಕೆ ಅಂಕದಿಂದ ಅಂಕಕ್ಕೆ ಅವರ ಜೀವನನಾಟಕ ಭರತಖಂಡದ ಜೀವನನಾಟಕದಲ್ಲಿ ಹಾಸುಹೊಕ್ಕಾಗಿ ಎಸಳೆಸಳೆಸಳಾಗಿ ಅರಳಿತು. ಅರಳುತ್ತಾ ಅರಳುತ್ತಾ ದಿಕ್ಕುದಿಕ್ಕಿಗೆ ಅವರ ಸೌರಭವನ್ನು ಹರಡಿ ಜಗನ್ನೇತ್ರಾಳಿಗಳನ್ನು ತನ್ನೆಡೆಗೆ ಆಕರ್ಷಿಸುತ್ತಾ ಕೊನೆಗೆ ಸಹಸ್ರದಳ ಪದ್ಮವಾಗಿ, ತಪೋನಿರತನಾದ ಭಾರತ ಭಾಗ್ಯವಿಧಾತನಿಗೆ ಸ್ವಾತಂತ್ರ್ಯ ಸಹಸ್ರಾರು ಸಿಂಹಾಸನವಾಗಿ ಪರಿಣಮಿಸಿತು. ಅದರ ಉತ್ಕರ್ಷದ ಮಹೋನ್ನತಿ ಕೈಲಾಸಶಿಖರ ಶಿರಶ್ಚುಂಬಿಯಾಗುತ್ತಿದ್ದಾಗಲೆ ಅತ್ಯಂತ ನಾಟಕೀಯವಾಗಿ ಆಕಸ್ಮಿಕವೆಂಬಂತೆ ಜಗದ್‌ರಂಗದಿಂದ ಅಂತರ್ಧಾನವಾಯಿತು. ೧೯೪೮ ನೆಯ ಜನವರಿ ೩೦ ನೆಯ ಶುಕ್ರವಾರ ಸಂಜೆ. ಅದರ ಬಳಿಕನವೂ

ಅದರ ಸರುಗಂಪೂ ಭೂಮಿಯ ಆಕರ್ಷಣಶಕ್ತಿಯಂತೆ, ಸೂರ್ಯನ ಜ್ಯೋತಿ ಶಕ್ತಿಯಂತೆ, ಲೋಕಾಂಶವಾಗಿ, ಸೃಷ್ಟ್ಯಂಶವಾಗಿ, ನಿತ್ಯವಾಗಿದೆ. ಗಾಂಧೀಜಿ ಬಿಟ್ಟುಹೋಗಿರುವ ಸನ್ನಿಮ್ಮ ಪೃಥ್ವಿ ಅವರು ಪ್ರವೇಶಿಸಿದ ಅಂದಿನ ಪೃಥ್ವಿಗಿಂತಲೂ ಸಮಧಿಕತರವಾಗಿ ಶ್ರೀಮಂತವಾಗಿದೆ.

ಆದರೆ ಆ ಶ್ರೀ ಒಬ್ಬ ವ್ಯಕ್ತಿಯ ದುಡಿಮೆಯಂತೆ ತೋರಿದರೂ ಪೂರ್ವಾರ್ಜಿತವಾದ ಆಸ್ತಿಯ ಆಧಾರವಿಲ್ಲದಿದ್ದರೆ, ಅದರ ಬೆಂಬಲವಿಲ್ಲದಿದ್ದರೆ, ಒಬ್ಬ ವ್ಯಕ್ತಿಗೆ ಅದು ಸಾಧ್ಯವಾಗುತ್ತಿತ್ತೆ ? ಗಾಂಧೀಜಿ ಜರ್ಮನಿಯಲ್ಲಿ ಹುಟ್ಟಿದ್ದರೆ? ರಷ್ಯಾದಲ್ಲಿ ಹುಟ್ಟಿದ್ದರೆ? ಬಹುಶಃ ಪೃಥ್ವಿಯ ಇನ್ಯಾವ ದೇಶದಲ್ಲಿ ಹುಟ್ಟಿದ್ದರೂ ಆ ಶಕ್ತಿ ಈ ರೀತಿಯಲ್ಲಿ ವ್ಯಕ್ತವಾಗಿ ವಿಕಾಸಗೊಳ್ಳಲು ಸಾಧ್ಯವಾಗುತ್ತಿರಲಿಲ್ಲವೆಂದು ಇತಿಹಾಸಜ್ಞರಿಗೆ ವೇದ್ಯವಾಗುತ್ತದೆ. ಸ್ವಾಸ್ತಿಕದ ಚಪ್ಪಡಿಯ ಅಡಿಯಲ್ಲಿಯೊ, ಕುಡುಗೋಲುಸುತ್ತಿಗೆಯ ನಡುವೆ ಸಿಕ್ಕಿಯೊ ಆ ಜೀವಬೀಜ ಮೊಳಕೆಯಲ್ಲಿಯೆ ಜರ್ಝರಿತವಾಗುತ್ತಿತ್ತು. ಭರತವರ್ಷದ ಶತಶತಮಾನಗಳ ಸುದೀರ್ಘಕಾಲದ ಆತ್ಮಶ್ರೀ ಪೂರ್ಣವಾದ ಆಧ್ಯಾತ್ಮಿಕ ಸಂಸ್ಕೃತಿಯ ಅಮೃತೋಪಮವಾದ ಆಧಾರವೂ ಬೆಂಬಲವೂ ಪ್ರೇರಣೆಯೂ ಪ್ರೋತ್ಸಾಹವೂ ದೊರೆಯದಿದ್ದರೆ ಗಾಂಧೀಜಿಯ ಆವಿರ್ಭಾವ ಅಸಾಧ್ಯವಾಗುತ್ತಿತ್ತು.

ಶ್ರೀ ರಾಮಕೃಷ್ಣ ಪರಮಹಂಸರ ವಿಚಾರವಾಗಿ ಬರೆಯುತ್ತಾ ಋಷಿಸದೃಶನಾದ ಸಾಹಿತಿ ರೋಮಾ ರೋಲಾ (Romain Rolland) ಹೀಗೆಂದು ಬರೆಯುತ್ತಾನೆ:

“ಈ ಭಗವದ್ ವಿಭೂತಿಯ (ಶ್ರೀ ರಾಮಕೃಷ್ಣರ) ವ್ಯಕ್ತಿತ್ವವು ಒಂದು ಮಹಾಸ್ವರಮೇಲದಂತೆ ಸಹಸ್ರಾರು ರಾಗೋಪರಾಗಗಳ ಸಮನ್ವಯರಂಗವಾಗಿದೆ. ಅನೇಕ ತಲೆಮಾರುಗಳ ಸಾಧನ ಸಂಪತ್ತಿ ಆತನ ಹೃದಯದಲ್ಲಿ ಐಕ್ಯವಾಗಿದ್ದರೂ ಅದೆಲ್ಲ ವೈವಿಧ್ಯವನ್ನೂ ತನ್ನ ತನದೊಂದು ದೀಪ್ತಿಯ ಪೋಷಣೆಗೆ ತೈಲವೆಂಬಂತೆ ಸ್ವೀಕರಿಸಿ ಆತನ ಆತ್ಮಜ್ಯೋತಿ ಸಾರ್ವಭೌಮಿಕೋಜ್ವಲವಾಗಿ ರಂಜಿಸುತ್ತಿದೆ. ಸಹಸ್ರಾರು ಸಂವತ್ಸರಗಳಲ್ಲಿ ಕೋಟ್ಯಂತರ ಹೃದಯಗಳಲ್ಲಿ ಭಾರತಮಾತೆ ಸಾಧಿಸಿದ ತಪಸ್ಸೆ ಈತನಲ್ಲಿ ಮೂರ್ತಿಮತ್ತಾಗಿ ಸಫಲವಾಗಿದೆ.”

ತನ್ನ ಹುಟ್ಟಿದ ನಾಡನ್ನು ಬಿಟ್ಟರಿಯದ ಓದುಬರಹ ಅಷ್ಟೇನೂ ಬಾರದಿದ್ದ ಗಾಂಧೀಜಿಯಂತಲ್ಲದೆ ಬಹುಜನ ಸಂಪರ್ಕದಿಂದ ದೂರವಾಗಿದ್ದ ದಕ್ಷಿಣೇಶ್ವರದ ಗುರುದೇವನಿಗೆ ಅನ್ವಯವಾಗುವ ದಕ್ಕಿಂತಲೂ ಸತ್ಯತರವಾಗಿ ಗಾಂಧೀಜಿಯ ಬದುಕಿಗೆ ಹೊಂದಿಕೊಳ್ಳುತ್ತದೆ ಮೇಲೆ ಹೇಳಿದ ಮಾತು.

ಗಾಂಧೀಜಿ ಹುಟ್ಟುವಾಗ ಶ್ರೀರಾಮಕೃಷ್ಣ ಪರಮಹಂಸರಿಗೆ ೩೦ ವರ್ಷಗಳಾಗಿತ್ತು; ಸ್ವಾಮಿ ವಿವೇಕಾನಂದರಿಗೆ ೬ ವರ್ಷ; ರವೀಂದ್ರರು ಎರಡು ವರ್ಷದ ಹಸುಳೆ; ಸ್ವಾಮಿ ದಯಾನಂದ ಸರಸ್ವತಿಗಳಿಗೆ ಆಗಲೆ ೪೫ ವರ್ಷಗಳಾಗಿತ್ತು. ಇನ್ನು ಮೂರೇ ವರ್ಷಗಳಲ್ಲಿ ಶ್ರೀ ಅರವಿಂದರ ಜನ್ಮಧಾರಣೆಗೆ ವಿಧಿ ಸಂಕಲ್ಪಿಸಿದ್ದಿತು; ಶ್ರೀ ರಮಣ ಮಹರ್ಷಿಗಳಿಗೆ ಆಗ ಹನ್ನೊಂದು ವರ್ಷವಾಗಿತ್ತು. ಈ ಪ್ರಖ್ಯಾತವಾದ ಆಧ್ಯಾತ್ಮಿಕ ಜ್ಯೋತಿಗಳನ್ನು ಮಾತ್ರ ಗಮನಿಸಿದರೂ ಕೂಡ ಆ ಕಾಲಮಾನ ಎಷ್ಟು ಶ್ರೀಮಂತಗರ್ಭಿತವಾಗಿತ್ತು ಎಂಬುದು ಹೊಳೆಯುತ್ತದೆ. ಶುದ್ಧ ಆಧ್ಯಾತ್ಮಿಕವಲ್ಲದೆ ಲೌಕಿಕವೂ ಆಗಿರುವ ಬೇರೆ ಎಷ್ಟೋ ಇತರ ಮಹಾಪುರುಷರೂ ಗಣ್ಯವ್ಯಕ್ತಿಗಳೂ ವಿಜ್ಞಾನಿಗಳೂ ಕವಿಗಳೂ ಆ ಕಾಲಮಾನದಲ್ಲಿ ಜನ್ಮವೆತ್ತಿದ್ದಾರೆ ಎಂಬುದನ್ನು ನೆನೆದರೆ ಆದರ ವಿಭವ, ಸಾಮಾನ್ಯರು ಊಹಿಸುವಂತೆ, ಬರಿಯ ಕಾಕತಾಳೀಯ ಮಾತ್ರವೇ ಎಂದು ಸಂದೇಹಪಡಬೇಕಾಗುತ್ತದೆ. ಶ್ರೀ ವಿವೇಕಾನಂದರು ಭರತಭೂಮಿಯ ಸರ್ವೋದಯದ ವಿಚಾರದಲ್ಲಿ ಹೇಳಿದಂತೆ, ಯುಗನಿದ್ರೆಯಿಂದ ಎಚ್ಚರಗೊಳ್ಳುವ ಮಹಾಕಾಳಿಯ ಬೇರೆ ಬೇರೆ ತೋಳುಗಳು ಅಲ್ಲಲ್ಲಿ ಮೈದೋರಿದಂತೆ ಭಾಸವಾಗುತ್ತದೆ. ಆದಿಶಕ್ತಿಯ ತರಂಗಿತೇಚ್ಛೆ ತನ್ನ ಉದ್ದೇಶಪೂರ್ವಕವಾದ ಚಿನ್ಮಯ ಸೂತ್ರಗಳನ್ನೆಳೆದು ಸರ್ವೋದಯ ರಂಗದಲ್ಲಿ ತನ್ನ ಲೀಲಾವಿಭೂತಿಗಳನ್ನು ಅಲ್ಲಲ್ಲಿ ಮೂಡಿಸುವಂತೆ ತೋರುತ್ತದೆ. ಪೂರ್ಣದೃಷ್ಟಿಯಿಂದ ಧ್ಯಾನಿಸಿದರಂತೂ ನಮ್ಮ ಊಹೆ ಶ್ರದ್ಧೆಯಾಗತೊಡಗಿ ಅನುಮಾನವು ನಿಶ್ಚಿತವಾದ ಅಂತರ್ಜ್ಞಾನವಾಗುತ್ತದೆ. ಬಂಕಿಮಚಂದ್ರ ಮಹಾಶಯನು ಯಾವ ಲೋಕಾಲೋಕ ಶಕ್ತಿಯನ್ನು 'ವಂದೇ ಮಾತರಂ' ಎಂಬ ಮಂತ್ರಗೀತೆಯಿಂದ ರಾಷ್ಟ್ರಪುರುಷನ ಹೃದಯಕ್ಕೆ ಆಹ್ವಾನಗೈದು, ರಾಷ್ಟ್ರಕುಂಡಲಿನಿ ಉನ್ಮೀಲಿತವಾಗಿ ಉನ್ಮೇಷಗೊಳ್ಳುವಂತೆ ಮಾಡಲು ಸಮರ್ಥನಾದನೋ ಆ ಚಿಚ್ಛಕ್ತಿಯ ಇಚ್ಛಾವಿನ್ಯಾಸಗಳೆ ಈ ಎಲ್ಲ ವಿಭೂತಿಗಳೋಪಾದಿಯಲ್ಲಿ ವಿಕಾಸಗೊಳ್ಳುವುದನ್ನು ಕಾಣುತ್ತದೆ ಪೂರ್ಣದೃಷ್ಟಿ.

ಗಾಂಧೀಜಿಯ ಜೀವನವನ್ನು ಆ ದೃಷ್ಟಿಯಿಂದ ಅವಲೋಕಿಸಿದರೆ ದೇಶಭಕ್ತಿ, ಸಮಾಜಸೇವೆ, ಸ್ವಾತಂತ್ರ್ಯಸಂಪಾದನೆ, ಹರಿಜನೋದ್ಧಾರ, ಸ್ವದೇಶಿ, ಖಾದಿ, ಇತ್ಯಾದಿ ರಾಜಕೀಯ ಸಾಮಾಜಿಕ ಆರ್ಥಿಕ ಭೂಮಿಕೆಗಳಿಗೆ ತುರೀಯವಾದ ಶಾಶ್ವತ ತತ್ತ್ವವೊಂದು ಬೋಧೆಯಾಗುತ್ತದೆ. ಆ ತತ್ತ್ವವೆ ಪೂರ್ಣ ಮನುಷ್ಯತ್ವದ ಸಂಪೂರ್ಣ ವಿಕಾಸಕ್ಕೆ ಕಾರಣವೆಂದೂ 'ಸಕಲ ಪ್ರಯೋಜನ ಮೂಲಿಭೂತ'ವಾದ ಸಚ್ಚಿದಾನಂದ ಸಾಕ್ಷಾತ್ಕಾರವೆ ಅದರ

ಅವತರಣೋದ್ದೇಶವೆಂದೂ, ಆ ಪರಮ ಪ್ರಯೋಜನವು ಅತೀತದಲ್ಲಿ ಮಾತ್ರ ಇಲ್ಲದೆ ಐಹಿಕದಲ್ಲಿಯೂ ಸಂಸ್ಥಾಪಿತವಾಗಬೇಕಾಗಿರುವುದು ಸೃಷ್ಟಿಯ ಚರಮೋದ್ದೇಶವೆಂದೂ ನಮಗೆ ಬುದ್ಧಿಗೋಚರವಾಗುತ್ತದೆ. ಅಂತಹ ಅಮರ್ತ್ಯಸ್ಥಿತಿ ಮರ್ತ್ಯಕ್ಕೂ ಇಳಿಯಲು ಮನುಷ್ಯತ್ವ ತನ್ನ ಸರ್ವಸ್ವವನ್ನೂ ಸಮರ್ಪಿಸಲು ತಪಸ್ವಿಯಾಗದಿದ್ದರೆ ಬರಿಯ ರಾಜಕೀಯವೂ ಸಾಮಾಜಿಕವೂ ಆರ್ಥಿಕವೂ ಆಗಿರುವ ಪ್ರಯತ್ನಗಳಿಂದ, ಅವು ಎಷ್ಟೇ ಶ್ಲಾಘನೀಯವಾಗಿರಲಿ ಉದಾತ್ತವಾಗಿರಲಿ, ಸುಖಶಾಂತಿಗಳು ನಮ್ಮ ಭಾಗಕ್ಕೆ ಬರಿಯ ಹಂಬಲಿಕೆಗಳಾಗಿಯೆ ಉಳಿಯುತ್ತವೆ ಎಂಬ ಎಚ್ಚರಿಕೆಗೆ ಗಾಂಧೀಜಿಯ ಜೀವನ ಚರಿತ್ರೆ, ತಪಿಸುತ್ತಿರುವ ಪ್ರಪಂಚಕ್ಕೆ ವಿಧಿ ಎತ್ತಿದ ಬೆಂಕಿಯ ತೋರ್ಬೆರಳಂತೆ ಒಂದು ಭಗವತ್ ಸಾಕ್ಷಿಯಾಗಿದೆ.






ಸಿದ್ಧವನಹಳ್ಳಿ ಕೃಷ್ಣಶರ್ಮ

ಕುರುಡು ಕುನ್ನಿಗಳಾಗಿದ್ದ ನಮಗೆ ಕಣ್ಣು ಕೊಟ್ಟೆ, ಕಸುವು ಕೊಟ್ಟೆ—ತಂದೆ, ಬಾಪು. ಹಲವು ಬಗೆ, ಬಣ್ಣ ಆಗಿದ್ದ ನಮ್ಮನ್ನು ಒಂದಾಗಿ, ಒಂದು ರಾಷ್ಟ್ರವಾಗಿ ಕಟ್ಟಿದೆ. ನಮಗೊಂದು ರಾಷ್ಟ್ರಭಾಷೆ ಕೊಟ್ಟೆ, ಹೊಸದೊಂದು ಸಂಪ್ರದಾಯ—ಸಂಸ್ಕೃತಿಯನ್ನು ನೀಡಿದೆ. ಹಗೆ ಹೊಲ್ಲ, ಒಲವೇ ಚೆಲ್ಲ ಎಂಬ ಪಳವಾತನ್ನು ಆಡಿ-ಮಾಡಿ ತೋರಿದೆ. ನಮಗೊಂದು ಹೊಸ ಪಂಥವನ್ನು ಹಾಕಿಕೊಟ್ಟೆ. ನಮ್ಮನ್ನು ಅಹಿಂಸೆಯಲ್ಲಿ ಅದ್ದಿದೆ, ತಿದ್ದಿದೆ. ಸರಕಾರಿಗಳು ನಾವು, ಆಳ್ವಡೆಗಳು ನಾವು. ನಮ್ಮನ್ನು ಕಟ್ಟಿಕೊಂಡೇ ಸ್ವರಾಜ್ಯ ಗಳಿಸಿದೆ. ಕಪಿಸೇನೆಯನ್ನು ನಡಸಿ ಶ್ರೀ ರಾಮಚಂದ್ರ ಲಂಕೆಯನ್ನು ಗೆಲ್ಲಲಿಲ್ಲವೆ?

ಬಿರುಗಾಳಿಯಂತೆ ಬೀಸಿ ಬಂದೆ; ಮಿಂಚಿನಂತೆ ಹೊಳೆ ಹೊಳೆದು ಬಂದೆ; ಜಲಪಾತದಂತೆ ಧುಮುಧುಮುಕಿ ಬಂದೆ; ಮಹಾ ನದಿಯಂತೆ ಹರಿಹರಿದು ಬಂದೆ. ದೇಶವನ್ನೇ ಅಲ್ಲಾಡಿಸಿದೆ. ನಮ್ಮ ಜೀವಗಳನ್ನೆಲ್ಲ ಕಲಕಿದೆ. ನಮ್ಮ ಪಾಪವ ಸುಟ್ಟೆ. ಕ್ಲೈಬ್ಯವ ಕಳೆದೆ, ಮನುಷ್ಯರನ್ನಾಗಿ ಮಾಡಿದೆ. ಏನು ಆ ಶಿಲ್ಪ! ಎಂಥ ಚಾತುರಿ ಬಾಪು!

ಬಡ ದೇಶದಲ್ಲಿ, ದಸ್ಯು ದೇಶದಲ್ಲಿ ಹುಟ್ಟಿದೆ. ಅಜ್ಞಾನಿಗಳ, ಮೂರ್ಖರ, ಅಂಧರ ನಡುವೆ ಬಂದೆ. ಎತ್ತ ನೋಡಿದರೂ ಶೋಷಣ. ಎತ್ತಲೂ ದುಃಖ ನಿಜ. ಇಂಥಲ್ಲಿ ಅಲ್ಲದೆ ಸುಖದಲ್ಲಿ ಹುಟ್ಟಿ ಏನು ಸಾರ್ಥಕ? ಕತ್ತಲಿದ್ದಲ್ಲಿ ತಾನೆ ಬೆಳಕುಬೇಕು!

ನಮ್ಮೆಲ್ಲರ ಬಡತನವನ್ನೆಲ್ಲ ತಲೆಯಮೇಲೆ ಹೊತ್ತೆ. ಮನೆಮಾರು, ಮಡದಿ ಮಕ್ಕಳು ಎಲ್ಲವನ್ನೂ ಬಿಟ್ಟೆ, ಬೈರಾಗಿಯಾದೆ, ಬೆತ್ತಲೆಯಾದೆ, ರೈತನಾದೆ, ರಾಟೆ ಹಿಡಿದೆ. ರಾಟೆಗಿಂತ ಮೇಟಿಯಿಲ್ಲ ಎಂದೆ, ನಾವು ನೂಲಲಿ ಎಂದು ನೀ ಸದಾ ನೂತೆ, ನಮಗೆ ದಾರಿ ತೋರಲು ನೀ ನಡೆದೆ. ನೀವು ಬಂದುದು ಬಾರದಿದ್ದರೂ ನಾನೀ ದಾರಿ ತುಳಿಯುತ್ತೇನೆ. ಈ ಹೆಜ್ಜೆಯ ಗುರುತಾದರೂ

ನಿಮಗಿರಲಿ. ಅರಿವು ಬಂದಾಗ ನಿಮಗೆ ದಾರಿ ತೋರದಿದ್ದೀತು ಎಂದು ಒಬ್ಬನೇ ನಡೆದೆ. ಏನು ದಯೆಯೋ ತಂದೆ! ಏನು ವಾತ್ಸಲ್ಯವೋ!

ಚಿತ್ತದಾಸ್ಯ, ವಿತ್ತದಾಸ್ಯಗಳಿಂದ ಕ್ರಿಯಾಶೂನ್ಯರಾಗಿದ್ದೆವು ನಾವು. ಕಾಯಕವೆ ಕೈಲಾಸವೆಂದು ಡಂಗುರ ಹೊಡೆದೆ. ದುಡಿದವನೇ ದೇವರು, ದುಡಿಯದವ ಕಳ್ಳ ಎಂದೆ. ದಿಟ್ಟ ನೀನು, ನೀನು ಆಸಕ್ತ. ನಮಗೆ ಮೇಲ್ಪಂಗ್ತಿಯಾಗಲಿ ಎಂದು ನಮ್ಮಂತೆ, ಆಸಕ್ತರಂತೆ ದುಡಿದೆ. ದುಡಿತ ಅಮಂಗಲವಲ್ಲ, ಹೀನವಲ್ಲ ಎಂದೆ. ನಾನು ರೈತ-ನೇಕಾರ ಎಂದೆ. ಮತ್ತೆ ಈ ದೇಶ ಸೂತ್ರಕಾರೇಭ್ಯೋನಮಃ ವಸ್ತ್ರಕಾರೇಭ್ಯೋನಮಃ ಎನ್ನುವಂತೆ ಮಾಡಿದೆ.

ಹೊಲೆಯರು ನನ್ನವರು, ದಲಿತರು ನನ್ನವರು, ಪತಿತರು ಪಾಪಿಗಳು ನನ್ನವರು ಎಂದೆ. ಎಲ್ಲ ಧರ್ಮವೂ ಒಂದೇ; ವಿಭೇದ ಸಲ್ಲದು ಎಂದೆ. ಇದು ಸತ್ಯ ಇದು ಸತ್ಯ ಎಂದು ಗೋಪುರ ಹತ್ತಿ ಘೋಷಿಸಿದೆ; ಭೇರಿ ಮೊಳಗಿಸಿ ಹೇಳಿದೆ.

ನಮ್ಮ ಕಣ್ಣ ಪರೆ ಬಿಡಿಸಿದೆ. ಹೊಲೆತನ ಅಳಿಯಿತು. ಕೀಳು-ಮೇಲೆಂಬ ಭೇದ ಇಳಿಯಿತು. ಸಮಾನತೆಯನ್ನು ಸ್ಥಾಪಿಸಿದೆ. ಸಾವಿರ ವರ್ಷದ ಪಾಚಿಗಳಿಗೆಯೊಳಗೆ ಕತ್ತರಿಸಿದೆ, ಹೆಣ್ಣು ಹೆಣ್ಣು ಎಂದು ಜರಿದು ಜರಿದು ಗಾವಿಲರು ಕುಲಕ್ಷಯ ದೇಶಕ್ಷಯ ಮಾಡಿದ್ದರು. ಹೆಣ್ಣು ಮಣ್ಣಲ್ಲ, ಮೈಯಲ್ಲ, ಕಾಮದ ಗೊಂಬೆಯಲ್ಲ. ಅದು ಒಂದು ಜೀವ, ಅಹಿಂಸೆಯ ಅವತಾರ ಎಂದೆ. ಹೆಣ್ಣನ್ನು ತಂಗಿ ಎಂದೆ; ತಾಯಿ ಎಂದೆ. ಲೋಕಕ್ಕೆ ಆಕೆ ಗುರು ಎಂದೆ. ದೇಶ ಸೇವೆಗೆ ಬನ್ನಿ ಎಂದು ಆಕೆಯ ಕರೆದೆ. ನಿನ್ನ ಮಾತಿನ ಮರುಳೇ ನಿನ್ನ ಜೀವದ ಬೆಳಕೋ ಹೆಣ್ಣು ಮುನ್ನುಗ್ಗಿದಳು. ದೇಶದಲ್ಲಿ ಮಿಂಚನ್ನೆ ಹರಡಿದಳು. ಹಲವು ಕಾಲದ ಸಂಕೋಲೆ ಕಡಿದುಹೋಯಿತು. ನಿನ್ನ ಧೈರ್ಯ ನಿನ್ನದೇ ತಂದೆ. ನಿನ್ನ ನೋಡಿ ನಿನ್ನದೇ.

ಸ್ವಾತಂತ್ರ್ಯಸಂಗ್ರಾಮಕ್ಕೆ ನಮ್ಮನ್ನು ಹೂಡಿದೆ. ರಣಾಂಗಣದಲ್ಲಿ ನಿಂತು ಅಹಿಂಸೆಯನ್ನು ಬೋಧಿಸಿದೆ. ನಿನ್ನ ಮಾತು ನಮಗೆ ಅರಗಲಿಲ್ಲ. ಹಿಂಸೆಮಾಡಿದೆವು. ನೀನೊಂದೆ, ತಪಸ್ಸುಮಾಡಿದೆ. ನಮ್ಮ ತಪ್ಪಿಗೆ ನೀ ಪ್ರಾಯಶ್ಚಿತ್ತ ಮಾಡಿಕೊಂಡೆ. ನಮ್ಮನ್ನು ಮನ್ನಿಸಿದೆ. ಮತ್ತೆಮತ್ತೆ ಆ ರೀತಿ ಮಾಡಿ ನಮ್ಮನ್ನು ತಿದ್ದಿದೆ. ಅಪ್ರತಿಮ ಆಚಾರ್ಯ ನೀನು!

ಸತ್ಯಕ್ಕೆ ಅಸತ್ಯ ಹಗೆ. ಬೆಳಕಿಗೆ ಕತ್ತಲು ಶತ್ರು. ಒಲರಿಗೆ ಹಗೆತನ ವೈರಿ. ನಮ್ಮೊಳಗಿನ ಹಗೆತನ, ಹಿಂಸೆ, ಅಸತ್ಯ ನಿನ್ನನ್ನು ಕೊಂದಿತು. ನಿನ್ನ ಪ್ರಖರ ತೇಜ ನಮ್ಮ ಕಣ್ಣಿಗೆ ಸಹಿಸಲಿಲ್ಲ. ನಮ್ಮ ಕಣ್ಣು ಹೊಸೆವುದು ಬಿಟ್ಟು ನಿನ್ನ ಮೈಯ ಮಣ್ಣನ್ನು ಹಿಸುಕಿಹಾಕಿದೆವು. ೧೨೫ ವರ್ಷ ಬದುಕಿ, ನಮ್ಮನ್ನು

ದಂಡೆಗೆ ಮುಟ್ಟಿಸಿ, ಸತ್ಯಯುಗವನ್ನೇ ಇಲ್ಲಿ ನೆಲೆಗೊಳಿಸಬೇಕೆಂದಿದ್ದೆ ; ಬಾಪು. ವೈಕುಂಠವನ್ನ ಭೂಮಿಗಿಳಿಸುವ ಕನಸು ಕಟ್ಟಿದೆ. ಅದು ನನಸಾಗಬೇಡವೆ ತಂದೆ.

ಸ್ವರ್ಗದ ಬಾಗಿಲಲ್ಲಿ ಕಾಲಿಟ್ಟಾಗ ಭೂಮಿಯ ಗೋಳು ಕೇಳಿ ಅವಲೋಕಿತೇಶ್ವರ, ನಾನೊಲ್ಲೆ ಇದು. ಅವರ ಗೋಳು ನಿಲ್ಲುವತನಕ ನನಗವರ ಸೇವೆಯೇ ಸ್ವರ್ಗ ಎಂದನಂತೆ. ಬಾಪು, ನಮ್ಮ ಕೂಗು, ನಮ್ಮ ಗೋಳು ನಿನಗೆ ಕೇಳದೆ? ನಿನ್ನ ಮಾನಸಸಂತಾನ ನಾವು ; ಶಿಷ್ಯಸಂತಾನ ನಾವು. ನಮ್ಮನ್ನು ನೀನಾಗಿ ಅಗಲುವೆಯಾ ತಂದೆ?

ಭಾರತದ ಪುರಾತನ ಸಂಸ್ಕೃತಿಯೇ ಮೈವೆತ್ತು ಬಂದಂತಿತ್ತು ನಿನ್ನನ್ನು ನೋಡಿದಾಗ. ಪರಿತ್ಯಾಗದಲ್ಲಿ ಬುದ್ಧ ; ಸತ್ಯ ಸಂಧತೆಯಲ್ಲಿ ಹರಿಶ್ಚಂದ್ರ ; ಶಪಥದಲ್ಲಿ ಭೀಷ್ಮ ; ಗುಣಗಾಂಭೀರ್ಯದಲ್ಲಿ ಶ್ರೀರಾಮ ; ಧರ್ಮಸಂಸ್ಥಾಪನೆಯಲ್ಲಿ ವ್ಯಾಸ ; ಸತ್ಯಾಗ್ರಹದಲ್ಲಿ ಪ್ರಹ್ಲಾದ; ಲೋಕಸಂಗ್ರಹದಲ್ಲಿ ಶ್ರೀಕೃಷ್ಣ— ಇಡೀ ವಿಭೂತಿಗಣವೇ ನಿನ್ನಲ್ಲಿ ಕಾಣುತ್ತಿತ್ತು. ಎಂಥ ವಿರಾಡ್ರೂಪ ನಿನ್ನದು ! ಎಂಥ ಪೂರ್ಣವ್ಯಕ್ತಿ, ಬಾಪು !

ನಿನ್ನ ಮಾಯೆಯ ನಾವೇನುಬಲ್ಲೆವು ಅಜ್ಞಾನಿಗಳು. ಯಾವರೂಪೋ ಈಗ ನಿನ್ನದು? ಸುತ್ತಲಿನ ಗಾಳಿಯಲ್ಲಿ ಇದ್ದೀಯೋ ಏನೋ! ನಮ್ಮ ಎದೆಯಲ್ಲಿ, ನಮ್ಮ ದನಿಯಲ್ಲಿ, ನಾವು ನೂಲುವ ದಾರದೆಳೆಯಲ್ಲಿ ಇದ್ದೀಯೋ ಏನೋ ! ನಮ್ಮ ಗುಡಿಗೆ ಬರುವ ಹೊಲೆಯ ಭಕ್ತ ನೀನಲ್ಲವೇ ? ಸತ್ಯವಾದಿನಿ—ಅಹಿಂಸಾ ಪೂಜಾರಿಣಿ ಹೆಣ್ಣು ನೀನಲ್ಲವೆ? ಕಸತಿಂದು ರಸವಿತ್ತು ಸಲಹುವ ಗೋವು ನೀನಲ್ಲವೆ? ದಾಸ್ಯವನ್ನು ಕೆಡೊಗೆಯಲು ಸೆಣಸುವ ದಲಿತ—ಪತಿತ ನೀನಲ್ಲವೆ? ಅರಿಯಲಾರದೆ ತೊಳಲುವ ನಮ್ಮ ಮನ್ನಿಸು ತಂದೆ. ಕೈಹಿಡಿದು ನಡೆಸು.

ಗಾಂಧೀ ಸತ್ತಾನು. ಗಾಂಧೀ ಪಂಥವಿದ್ದೀತು ಎಂದು ೧೮ ವರ್ಷದ ಹಿಂದೆಯೇ ನೀ ಹೇಳಿದೆ. ಆಮಾತು ಈಗ ದಿಟವಾಗಬೇಕು. ಆ ಹೊಣೆ ನಮ್ಮದು; ಆ ಋಣ ನಮ್ಮದು. ನಿನ್ನ ದಯೆಯೊಂದಿರಲಿ ತಂದೆ ಅಖಂಡವಾಗಿ. ನಿನ್ನ ಹೆಸರ ಹೊತ್ತು, ನಿನ್ನ ತತ್ವ ಬಿತ್ತಿ, ನಿನ್ನ ಪಂಥ ಕಟ್ಟಿ ಪಿತೃಋಣ ತೀರಿಸೇವು.

ಇದು ಶಪಥ, ಬಾಪು. ಇದು ಪ್ರಣಾಮ. ಆಶೀರ್ವದಿಸು.

ಉಧೋ ಉಧೋ ಒಳಗಿರುವ ಬೆಳಕೆ, ಬೆಳಕೆ !
ಉಧೋ ಉಧೋ ಹೊರಗೆಹರಿ, ಏಕೆ ಒಳಕೆ ?

# ರಾಮರಾಜ್ಯ

ನ. ಭದ್ರಯ್ಯ

ಗಾಂಧೀಜಿ ಉದ್ಭವಿಸಿದರು. ಭಾರತವನ್ನು ಉದ್ಧಾರಮಾಡಿದರು. ಭವ್ಯ ಬಾಳು ಬಾಳಿದರು. ನಮಗೆ ಸ್ವಾತಂತ್ರ್ಯ ತಂದು ಕೊಟ್ಟರು. ಕೊನೆಗೆ ಅವರ ನಶ್ವರದೇಹ ನಮ್ಮಿಂದ ಮರೆಯಾಯಿತು. ಆದರೆ ಅವರ ದಿವ್ಯಬಾಳು ನಮಗೆ, ವಿಶ್ವಕ್ಕೇ ನಂದಾದೀವಿಗೆಯಾಗಿ ಉಳಿದಿದೆ. ಶ್ರದ್ಧಾಸಕ್ತಿಯುಳ್ಳ ಯಾರು ಬೇಕಾದರು ಆ ಬೆಳಕಿನಿಂದ ತಮ್ಮ ಜೀವನವನ್ನು ಬೆಳಗಲು ಸಾಧ್ಯವಾಗಿದೆ.

ಅವರ ಉದ್ದೇಶ ಮಹತ್ತಾದುದು; ಅವರ ಸಂಸ್ಕೃತಿ ಸಹಜವಾದುದು; ಚಿರವಾದುದು; ಅದು ಮಣ್ಣಿಗೆ ಅಂಟಿದ ಸಂಸ್ಕೃತಿ. ಎಲ್ಲೋ ಹಾರಾಡುವ ಸಂಸ್ಕೃತಿಯಲ್ಲ. ಭೂಮಿಯನ್ನೇ ಸ್ವರ್ಗವಾಗಿ ಮಾಡುವ ದಾರಿ ಅದು. ಅದನ್ನೇ ಅವರು ರಾಮರಾಜ್ಯ ಎಂದದ್ದು.

ರಾಮರಾಜ್ಯ; ಏನದು? ಗಾಂಧೀಜಿ ರಾಮರಾಜ್ಯವೆಂದು ಒಂದು ಆದರ್ಶ ರಾಜ್ಯವನ್ನು ಕಟ್ಟಲು ಹೆಣಗಿದರು. ರಾಮರಾಜ್ಯದಲ್ಲಿ ಉತ್ಪತ್ತಿ ಒಂದೆರಡು ಪಟ್ಟಣಗಳಲ್ಲಿ ಕೇಂದ್ರೀಕರಿಸುವುದಿಲ್ಲ. ಅಲ್ಲಿ ರಾಜ್ಯದಲ್ಲೆಲ್ಲ ಸಣ್ಣ ಸಣ್ಣ ಹಳ್ಳಿಗಳು ಹರಡಿ ಅವು ಸ್ವಾವಲಂಬನದಿಂದ ಕೂಡಿರುತ್ತವೆ. ಆ ಹಳ್ಳಿಗಳ ಆರ್ಥಿಕಸ್ಥಿತಿ ಆಮದು ರಫ್ತುಗಳಿಂದ ಮುಕ್ತವಾಗಿರುತ್ತದೆ. ಸಂಸಾರದ ಪ್ರತಿಯೊಬ್ಬನೂ ತನಗೆ, ತನ್ನ ಸಂಸಾರಕ್ಕೆ ಬೇಕಾದ ಸಾಮಾನುಗಳನ್ನು ಉತ್ಪತ್ತಿಮಾಡಿಕೊಳ್ಳಬೇಕು. ಬಿಡುವು ಕಾಲವನ್ನು ತನ್ನ ಆತ್ಮೋದ್ಧಾರಕ್ಕೆ ಉಪಯೋಗಿಸಬೇಕು. ಒಬ್ಬನು ಮತ್ತೊಬ್ಬನೊಡನೆ ಸಹಕರಿಸಿ, ಒಂದು ಹಳ್ಳಿ ಮತ್ತೊಂದು ಹಳ್ಳಿಯೊಡನೆ ಸಹಕರಿಸಿ ಬಾಳಬೇಕು. ಇಂಥ ಹಳ್ಳಿಗಳಲ್ಲಿ ಯಂತ್ರಯುಗ ಸ್ವಪ್ನವಾಗುಳಿಯುವುದು. ದೊಡ್ಡ ದೊಡ್ಡ ಯಂತ್ರಕೇಂದ್ರಗಳು ನಿರುದ್ಯೋಗವನ್ನು ತಂದು ಅಗತ್ಯವಿಲ್ಲದ ಉತ್ಪತ್ತಿಯನ್ನು ಅತಿ ಮಾಡುತ್ತವೆ, ಅದರಿಂದ ಸಮಾಜ ಶ್ರೀಮಂತ-ಬಡವ ಎಂದು ಇಬ್ಭಾಗವಾಗುತ್ತದೆ. ಯಂತ್ರ ಕೇಂದ್ರಗಳು ನಗರನಿರ್ಮಾಣಕ್ಕೆ ದಾರಿಮಾಡುತ್ತವೆ; ನೀತಿಗೆಡಿಸುತ್ತವೆ. ವರ್ಗ ವರ್ಗಗಳಲ್ಲಿ ತಿಕ್ಕಾಟ ಪ್ರಾರಂಭವಾಗುತ್ತದೆ. ಶಾಂತಿ

ಸಮಾಧಾನ ಕೆಡುತ್ತದೆ. ಈ ಅನಿಷ್ಟವನ್ನು ತಡೆಯಲು ರಾಮರಾಜ್ಯ ಸ್ಥಾಪನೆಯೇ ಮದ್ದು.

ಅಲ್ಲಿ, ರಾಮರಾಜ್ಯದಲ್ಲಿ ಜಾತಿ, ಕೋಮು, ವರ್ಣಭೇದವಿಲ್ಲ; ಮೇಲು ಕೀಳು ಭಾವನೆಯಿಲ್ಲ; ಸೋಮಾರಿತನವಿಲ್ಲ; ದ್ವೇಷಾಸೂಯೆಯಿಲ್ಲ; ಬಡವ ಬಲ್ಲಿದನಿಲ್ಲ. ಸಮಾಜಹಿತದಲ್ಲಿ ಯಾರು ಏನೇ ಕೆಲಸಮಾಡಲಿ ಎಲ್ಲರೂ ಸಮಾನರು. ತೀರ್ಪುಕೊಡುವ ನ್ಯಾಯಾಧೀಶ, ಬೀದಿಗುಡಿಸುವ ಭಂಗಿ ಇಬ್ಬರ ವೃತ್ತಿಯೂ ಸಮಾನವಾದವು; ಸಮಾನಗೌರವಯುತವಾದವು. ಶ್ರಮಜೀವನದ ಬಾಳು ಭವ್ಯಬಾಳು. ಸಮಾಜಹಿತದಲ್ಲಿ ಸತ್ಯಮಾರ್ಗದಲ್ಲಿ ದುಡಿಯಲು ಪ್ರತಿಯೊಬ್ಬನೂ ಬಾಧ್ಯ. ಹಾಗೆ ದುಡಿದವನು ತೃಪ್ತಿಯಿಂದ ಬಾಳಲು ಹಕ್ಕುಳ್ಳವನು. ಎಲ್ಲೆಲ್ಲೂ ಸುಭಿಕ್ಷ; ಎಲ್ಲಕಡೆಯೂ ತೃಪ್ತಿ, ಸಮಾಧಾನ. ಭೂಮಿ ಪ್ರೇಮಮಯ ಸ್ವರ್ಗ. ಅದೇ ರಾಮರಾಜ್ಯ.

ಹೌದು, ರಾಮರಾಜ್ಯದ ವರ್ಣನೆ ಚೆನ್ನಾಗಿದೆ; ಎಲ್ಲರಿಗೂ ಬೇಕು ಅನಿಸುತ್ತದೆ. ಆದರೆ ಅದರ ಸಾಧನಮಾರ್ಗ? ಆ ಮಾರ್ಗವನ್ನು ಗಾಂಧೀಜಿ ತೋರಿಕೊಟ್ಟಿದ್ದಾರೆ. ಆ ದಾರಿಯಲ್ಲಿ ನಮ್ಮ ನಾಡನ್ನು ಕೊಂಚ ದೂರ ನಡೆಸಿದ್ದಾರೆ. ಆ ಮಾರ್ಗ ಕರ್ತವ್ಯನಿಷ್ಠರಿಗೆ ಮಾತ್ರ ಕಾಣುತ್ತದೆ.

ಕೆಲವು ವರ್ಷಗಳ ಹಿಂದೆ ಹೆಚ್. ಜಿ. ವೆಲ್ಸ್ ಮಹಾಶಯ ಮಾನವನ ಹಕ್ಕುಗಳೇನು ಎಂಬುದನ್ನು ಗೊತ್ತುಮಾಡಲು ಹೊರಟರು. ವೆಲ್ಸ್ ಒಳ್ಳೇ ಸಾಹಿತಿ, ವಿಜ್ಞಾನಿ, ಇತಿಹಾಸಕಾರ, ದೊಡ್ಡಮನುಷ್ಯ. ಆತ ವಿಶ್ವದಲ್ಲಿ ಕೀರ್ತಿವೆತ್ತವರನ್ನೆಲ್ಲ ಮಾನವ ಹಕ್ಕುಗಳೇನು ಎಂದು ಕೇಳಿದರು. ಅವುಗಳ ಪಟ್ಟಿಯೊಂದು ನಿರ್ಮಾಣವಾಯಿತು. ಗಾಂಧೀಜಿಗೂ ಆಹ್ವಾನ ಬಂತು. ಗಾಂಧೀಜಿ ವೆಲ್ಸರವರು ರಚಿಸಿದ ಹಕ್ಕುಗಳ ಪಟ್ಟಿಯನ್ನು ಪರಾಂಬರಿಸಿ ಉತ್ತರವಿತ್ತರು: ವೆಲ್ಸ್ ಮಹಾಶಯ ನೀವು ಹಿಡಿದ ದಾರಿ ತಪ್ಪು. ಅದು ಮಾನವತ್ವದ ಗುರಿಯ ಕಡೆ ಒಯ್ಯಲಾರದು. ಬರಿಯ ಹಕ್ಕಿನ ಪಟ್ಟಿ ಮಾಡಿದರೇನು ಫಲ. ಅದು ಲಭಿಸುವುದಾದರು ಹೇಗೆ? ಮರ ಬೆಳಸದೆ ಹಣ್ಣು ಎಲ್ಲಿಂದ ಬಂದೀತು? ಮಾನವನು ನಿರ್ವಹಿಸಬೇಕಾದ ಕರ್ತವ್ಯದ ಪಟ್ಟಿಯೊಂದನ್ನು ಮಾಡಿ, ಸೂಜಿಯ ಹಿಂದೆ ದಾರಬರುವಂತೆ ಕರ್ತವ್ಯವನ್ನು ಹಕ್ಕು ಅನುಸರಿಸುತ್ತದೆ. ನನಗೆ ಚೆನ್ನಾಗಿ ಅನುಭವವಿದೆ. ನನ್ನ ಯೌವನದಲ್ಲಿ ಎಲ್ಲಿಯ ವರೆಗೆ ನನ್ನ ಹಕ್ಕು ಸಾಧಿಸಲು ಪ್ರಯತ್ನಪಟ್ಟೆನೋ ಅಲ್ಲಿಯ ವರೆಗೆ ನನಗೆ ಸುಖ ಸಿಗಲಿಲ್ಲ; ನನ್ನಲ್ಲಿ ಯಾವ ಪ್ರಭಾವವೂ ಮೂಡಲಿಲ್ಲ. ನನ್ನ ಹೆಂಡತಿಯ ಮೇಲೆ ಕೂಡ ನನ್ನ ಅಧಿಕಾರ ನಡೆಯುವುದಿಲ್ಲವೆಂಬುದನ್ನು

ಮನಗಂಡೆ. ಆಗ ನನ್ನ ಮನೆ, ನನ್ನ ನೆರೆ, ನನ್ನ ದೇಶ ಇವುಗಳ ಬಗ್ಗೆ ನನ್ನ ಕರ್ತವ್ಯವೇನು ಎಂಬುದನ್ನು ಅರಸಿದೆ. ಅದರಂತೆ ನಡೆದು ನಿರ್ವಹಿಸಿದೆ. ಅದರ ಫಲ ಏನು? ನಾನು ಬೇಕು ಅನ್ನದಿದ್ದರೂ ನನ್ನ ಜನರಲ್ಲಿ, ನನ್ನ ದೇಶದಲ್ಲಿ, ವಿಶ್ವದಲ್ಲಿ ಇನ್ನಾರಿಗೂ ಇಲ್ಲದಷ್ಟು ಪ್ರಭಾವ, ಹಕ್ಕು ನನಗೆ ಲಭಿಸಿತು.

ಗಾಂಧೀಜಿ ವೆಲ್ಸರವರಿಗೆ ಕೊಟ್ಟ ಉತ್ತರ ವೈಜ್ಞಾನಿಕ ಸತ್ಯ. ನಿಜವಾಗಿ ಸೂಕ್ಷ್ಮ ಶರೀರಿಯಾದ ಗಾಂಧೀಜಿಯಲ್ಲಿ ಉಕ್ಕಿನಂಥ ಶಕ್ತಿಯಿತ್ತು. ಅವರ ಆತ್ಮಶಕ್ತಿ ಬಂಡೆಯಂತೆ ಎಷ್ಟೋ ಬಲಶಾಲಿಯಾದ ಪ್ರಕೃತಿಯನ್ನೂ ಗೆಲ್ಲುವಂಥದು. ಸಣ್ಣ ಬಟ್ಟೆಯೊಂದನ್ನುಟ್ಟು ಬರಿ ಮೈಯ್ಯಲ್ಲಿದ್ದು ಅಷ್ಟೇನೂ ಪ್ರೇಕ್ಷಣೀಯರಲ್ಲದಿದ್ದರೂ ಅವರಲ್ಲಿದ್ದ ಅವರ್ಣನೀಯವಾದ ರಾಜತ್ವವೂ ಹಿರಿಮೆಯೂ ಮಿಕ್ಕವರಿಂದ ಭಕ್ತಿಯ ಪ್ರಣಾಮವನ್ನು ಪಡೆಯತಕ್ಕಂಥದಾಗಿದ್ದುವು. ಅವರು ಉದ್ದೇಶಪೂರ್ವಕವಾಗಿ ಅಶಕ್ತರಾಗಿ ಕಂಡರೂ ಸ್ವಾಭಾವಿಕವಾಗಿ ವಿನೀತರಾಗಿದ್ದರೂ ಅಧಿಕಾರ ಮತ್ತು ಶಕ್ತಿಸಂಪನ್ನರಾಗಿದ್ದರು. ಸಂದರ್ಭಗಳಲ್ಲಿ ಸಾರ್ವಭೌಮರೀತಿಯಿಂದ ಪರಿಪಾಲಿಸಲೇಬೇಕಾದ ಆಜ್ಞೆಗಳನ್ನು ಮಾಡುತ್ತಿದ್ದರು.

ಕರ್ತವ್ಯ ಪರಿಪಾಲನಾ ಮಾರ್ಗ, ಗಾಂಧೀಜಿ ತಾವು ನಡೆದು ನಮಗೆ ತೋರಿಕೊಟ್ಟ ದಾರಿ. ಈ ಮಾರ್ಗ ಸಹಜವಾದರೂ ಕಷ್ಟಕರವಾಗಿ ಕಾಣುತ್ತದೆ. ಮಾನವವರ್ಗ ಬಹುಕಾಲದಿಂದ ತನ್ನ ಹಕ್ಕನ್ನು ಮಾತ್ರ ಸಾಧಿಸುವ ವಾತಾವರಣದಲ್ಲಿ ಬೆಳೆದುಬಂದಿದೆ; ಅಸತ್ಯದ ವಾತಾವರಣದಲ್ಲಿ ಉಸಿರಾಡಿದೆ. ಆದರಿಂದ ಅವಕ್ಕೆ ಬದಲು ಅಂದರೆ ಏನೋ ಅಹಿತವಾದ ವಾತಾವರಣದಲ್ಲಿ ಕಾಲಿಟ್ಟಂತಾಗುತ್ತದೆ. ರೋಗಿಗೆ ಔಷಧಿ ಅಸಹ್ಯ; ಆದರೆ ಅದನ್ನು ನುಂಗದೆ ಖಾಯಿಲೆ ವಾಸಿಯಾಗದು.

ನಮ್ಮ ಕರ್ತವ್ಯವೇನು ಎಂಬುದನ್ನು ಅರಸಿ ದೃಢನಿಶ್ಚಯದಿಂದ ಸತ್ಯಮಾರ್ಗದಲ್ಲಿ ನಡೆದಂತೆ ನಮ್ಮ ಹೆಜ್ಜೆ ಹಗುರವಾಗುತ್ತದೆ; ಹಿತಕರವಾಗುತ್ತದೆ. ಆಗ ಮನುಷ್ಯ ಪ್ರೇಮಮಯಿಯಾಗುತ್ತಾನೆ, ಕರ್ಮಶೀಲನಾಗುತ್ತಾನೆ. ಸಮಾಜದ ಹಿತದಲ್ಲಿ ತನ್ನ ಹಿತ ಅಡಗಿದೆ ಎಂಬುದನ್ನು ಕಾಣುತ್ತಾನೆ.

ಈಗೇನಾಗಿದೆ? ತನ್ನ ಹಿತವೇ ಸಮಾಜದ ಹಿತ ಎಂಬ ತಪ್ಪುಭಾವನೆ ನಮಗೆ ಗೊತ್ತಾಗದಂತೆಯೇ ನಮ್ಮಲ್ಲಿ ಬೆಳೆದುಬಂದಿದೆ. ಆದರಿಂದ ನಾವು ಪ್ರತಿಕ್ಷಣವೂ ತಪ್ಪುದಾರಿ ತುಳಿಯುತ್ತಿದ್ದೇವೆ; ಸ್ವಾರ್ಥಿಗಳಾಗುತ್ತಿದ್ದೇವೆ. ಆ ಸ್ವಾರ್ಥಸಾಧನೆಗೆ ಇತರರು ಶ್ರಮಿಸುವಂತೆ ಮಾಡುತ್ತೇವೆ. ನಮಗೆ ಅಗತ್ಯವಿಲ್ಲದುದನ್ನು ಶೇಖರಿಸಿಡುತ್ತೇವೆ. ಆ ಶೇಖರಣೆಯಿಂದ ನಾವು ಇತರರಿ

ಗಿಂತ ಮೇಲು ಎಂಬ ಭಾವನೆಯನ್ನು ಬೆಳೆಸಿಕೊಳ್ಳುತ್ತೇವೆ. ಆದರಿಂದ ನಾವು ಶರೀರಶ್ರಮವಿಲ್ಲದೆ ಸುಖ ಅನುಭವಿಸಲು ಅರ್ಹರು ಎಂದುಕೊಂಡು ಸೋಮಾರಿಯಾಗುತ್ತೇವೆ. ಯಾವಾಗಲೂ ತಿನ್ನುವ ಚಟ ವೃದ್ಧಿಯಾಗುತ್ತದೆ. ರುಚಿ ಬಗೆಬಗೆಯಾಗುತ್ತದೆ. ಈ ದಾರಿಯಲ್ಲಿ ಅಡ್ಡಿ ಆತಂಕಗಳು ಎಲ್ಲಿ ಬಂದಾವೋ ಎಂದು ಹೆದರಿ ಭಯಪೀಡಿತರಾಗುತ್ತೇವೆ; ತಪ್ಪಿಸಿಕೊಳ್ಳಲು ಯಾರಿಗೆ ಬೇಕಾದರು ಅನ್ಯಾಯಮಾಡಲೂ ಅಸತ್ಯದಿಂದ ನಡೆಯಲೂ ಸಿದ್ಧರಾಗುತ್ತೇವೆ. ಹೀಗೆ ಒಂದರಿಂದ ಒಂದಕ್ಕೆ ತಪ್ಪು ಹೆಜ್ಜೆಯಿಟ್ಟು ಮಾನವಪತನದ ದಾರಿ ಹಿಡಿಯುತ್ತಾನೆ. ಸರಿ, ಇದರಿಂದ ಸಮಾಜದಲ್ಲಿ ವರ್ಗಗಳ ನಿರ್ಮಾಣವಾಗುತ್ತದೆ. ವರ್ಗವರ್ಗಕ್ಕೆ ಮನಸ್ತಾಪ ಬೆಳೆದು ಹೋರಾಟಕ್ಕಿಳಿದು ವಿಶ್ವದಲ್ಲಿ, ದುಃಖ ಸಂಕಟ ಹರಡುತ್ತವೆ. ಶ್ರೀಮಂತರಿಗಾಗಲಿ, ಶ್ರಮಜೀವಿಗಳಿಗಾಗಲಿ ನೆಮ್ಮದಿ ಇಲ್ಲದಂತಾಗುತ್ತದೆ. ಇದೆಲ್ಲ ಅನಿಷ್ಟವನ್ನು ತಪ್ಪಿಸಿ ವಿಶ್ವದಲ್ಲಿ ರಾಮರಾಜ್ಯವನ್ನೂ ಧರ್ಮಸಾಮ್ರಾಜ್ಯವನ್ನೂ ಸ್ಥಾಪಿಸಲು ಗಾಂಧೀಜಿ ಶ್ರಮಿಸಿದರು.

ಶ್ರೀರಾಮನ ಪಟ್ಟಾಭಿಷೇಕಕ್ಕೆ ಎಲ್ಲವೂ ಅಣಿಯಾಗಿತ್ತು. ಅಯೋಧ್ಯೆ ಸಂಭ್ರಮದಿಂದ ಓಲೈಸುತ್ತಿತ್ತು. ಇನ್ನೊಂದು ಅರೆದಿನದಲ್ಲಿ ಶ್ರೀ ರಾಮಚಂದ್ರ ರಾಜನಾಗಿ ರಾಜದಂಡ ಹಿಡಿಯಬೇಕಾಗಿತ್ತು. ಆದರೆ ಅದು ಅನಿರೀಕ್ಷಿತವಾಗಿ ತಪ್ಪಿ ರಾಮಚಂದ್ರ ಬಿಲ್ಲುಬಾಣ ಹಿಡಿದು ಹದಿನಾಲ್ಕು ವರ್ಷ ವನವಾಸಕ್ಕೆ ಹೋಗಬೇಕಾಯಿತು. ಹಿರಿಯ ಮಗ ರಾಜ್ಯದ ಉತ್ತರಾಧಿಕಾರಿ. ಅದು ಅವನ ಹಕ್ಕು. ಆದರೆ ರಾಮ ಕುಗ್ಗದೆ, ಕುಂದದೆ, ನೆಮ್ಮದಿ ಕೆಡದೆ ಹಸನ್ಮುಖಿಯಾಗಿ ಶಿಷ್ಟರಕ್ಷಣೆಗಾಗಿ ದುಷ್ಟಶಿಕ್ಷಣಕ್ಕಾಗಿ ವನವಾಸದ ಹಾದಿ ಹಿಡಿದ; ಕರ್ತವ್ಯನಿಷ್ಠನಾಗಿ ರಾಮರಾಜ್ಯ ಸ್ಥಾಪಿಸಿದ.

ನಾವೆಲ್ಲ ಸ್ವಾತಂತ್ರ್ಯ ಲಭಿಸಿದ ದಿನ ಆ ದಿನಾಚರಣೆ ನಡೆಸಿದೆವು. ರಾಷ್ಟ್ರದ ಮೂಲೆಮೂಲೆಯಲ್ಲೂ ಸಂಭ್ರಮ, ಸಡಗರ ತಾಂಡವವಾಡುತ್ತಿತ್ತು. ಆಗ ಆ ಸ್ವಾತಂತ್ರ್ಯವನ್ನು ನಮಗೆ ಸಾಧಿಸಿಕೊಟ್ಟ ನಮ್ಮ ಜನಾಂಗದ ಪಿತ ನಮ್ಮ ಸ್ವಾತಂತ್ರ್ಯದ ಶಿಲ್ಪ ಎಲ್ಲಿದ್ದರು? ದುಃಖಪಡುವವರ ಕಣ್ಣೀರೊರಸುತ್ತ ನೊಂದವರನ್ನು ಸಂತೈಸುತ್ತ, ದುರಾತ್ಮರನ್ನು ತಮ್ಮ ಆತ್ಮಬಲದಿಂದ, ಪ್ರೇಮದಿಂದ ಒಲಿಸಿಕೊಳ್ಳುತ್ತ, ಏಕಾಕಿಯಾಗಿ, ಪಾದಚಾರಿಯಾಗಿ ಬಂಗಾಳದಲ್ಲಿ ಯಾತ್ರೆ ಹೊರಟಿದ್ದರು. ತಾವು ಸಾಧಿಸಿದುದನ್ನೆಲ್ಲ ತಮ್ಮ ಮಕ್ಕಳಾದ ನಾವು ಅನುಭವಿಸಲು ಬಿಟ್ಟು ತಮ್ಮ ಕರ್ತವ್ಯ ನಿರ್ವಹಣದಾರಿಯಲ್ಲಿ ಮುಂದೆ ಮುಂದೆ ಸಾಗಿದರು.

ಗಾಂಧೀಜಿ ತಮ್ಮ ಜೀವಮಾನದಲ್ಲೆಲ್ಲ ಹೀಗೆ ನಡೆದು ಸಮಕಾಲೀನರಾದ

ನಾವು ಎಷ್ಟೋ ಬಲಹೀನರಿರಲಿ ನಮ್ಮ ಹೃದಯದಲ್ಲಿಯೂ ನೊಡರಿಟ್ಟು ಬೆಳಕುವಮಾಡಿದ್ದಾರೆ. ಅವರಿರುವ ವರೆಗೂ ಆ ನೊಡರಿಗೆ ತೈಲ ಎರೆಯುತ್ತ ಬತ್ತಿ ಮುಂದೂಡುತ್ತ ಆ ಬೆಳಕು ಆರದಂತೆ ನೋಡಿಕೊಂಡರು. ಸಮುದ್ರ ಮಥನಕಾಲದಲ್ಲಿ ಉತ್ಪತ್ತಿಯಾದ ನಂಜನ್ನುಂಡು ಸುರ, ಅಸುರರನ್ನು ಕಾಪಾಡಿದ ನಂಜುಂಡನಂತೆ ನಾವು ಅವರ ಮಕ್ಕಳು ತಪ್ಪಿ ನಡೆದು ದಿನ ದಿನವೂ ಉತ್ಪತ್ತಿಮಾಡುತ್ತಿದ್ದ ನಂಜನ್ನೆಲ್ಲ ನುಂಗಿ ನಮ್ಮನ್ನು ಪೋಷಿಸುತ್ತಿದ್ದರು. ಆದರೆ ಈಗ ಆ ನಂಜುಂಡನನ್ನು ಕಳೆದುಕೊಂಡಿದ್ದೇವೆ. ಅನಾಥರಾದ ನಾವು ಅವರು ತೋರಿಕೊಟ್ಟ ದಾರಿಯಲ್ಲಿ ನಡೆಯದಿದ್ದರೆ ಈಗ ಅವರಿಲ್ಲದಾಗ ಆ ವಿಷಜ್ವಾಲೆಯಿಂದ ಉರಿದುಹೋಗುತ್ತೇವೆ.

ಈ ವಿಷ ವಾತಾವರಣದಿಂದ ತಪ್ಪಿಸಿಕೊಳ್ಳಲು, ಅಷ್ಟೇ ಅಲ್ಲ ಅವರಿಚ್ಛೆಯಂತೆ ರಾಮರಾಜ್ಯ ಸ್ಥಾಪಿಸಲು ನಾವು ಪ್ರತಿಯೊಬ್ಬರೂ ಅನುಸರಿಸಬೇಕಾದುದೇನು?

ಪ್ರೇಮದಿಂದ ಸೇವಾಧರ್ಮ ದೀಕ್ಷೆ ಹೊತ್ತು ಸತ್ಯಮಾರ್ಗದಲ್ಲಿ ಕರ್ತವ್ಯ ನಿಷ್ಠರಾಗಿ ನಡೆಯಬೇಕಾದುದು ಈಗಿನ ಸನ್ನಿವೇಶದಲ್ಲಿ ಅನಿವಾರ್ಯ. ಸೇವಾಕಾರ್ಯವನ್ನು ಹೊತ್ತಿರುವವನು ತನ್ನ ಸುಖವನ್ನು ಕುರಿತು ಒಂದು ಕ್ಷಣವೂ ಆಲೋಚಿಸುವುದಿಲ್ಲ. ಅದನ್ನು ನೋಡಿಕೊಳ್ಳಲು ಈಶ್ವರನಿಗೆ ಬಿಟ್ಟು ಬಿಡುತ್ತಾನೆ. ಅದರಿಂದ ಅವನು ಸಿಕ್ಕಿದ್ದನ್ನೆಲ್ಲ ಅನುಭವಿಸಿ ಸ್ವೇಚ್ಛಾಚಾರಿಯಾಗುವುದಿಲ್ಲ; ತನಗೆ ಎಷ್ಟು ಅವಶ್ಯಕವಾಗಿರಬೇಕೋ ಅಷ್ಟನ್ನು ಮಾತ್ರ ತೆಗೆದುಕೊಂಡು ಉಳಿದುದನ್ನು ಇತರರಿಗೆ ಬಿಟ್ಟುಬಿಡುತ್ತಾನೆ. ತನಗಿಂತಲೂ ನೆರೆಯವನಿಗೆ ಅಗತ್ಯವಿದ್ದರೆ ತನ್ನ ಅವಶ್ಯಕತೆಯನ್ನೂ ನಿರ್ಲಕ್ಷಿಸುತ್ತಾನೆ. ಸೇನಾನಾಯಕ ಸಿಡ್ನಿ ಮಹಾಶಯ ಯುದ್ಧಭೂಮಿಯಲ್ಲಿ ನೊಂದು ಬಿದ್ದಿದ್ದ. ಬಾಯಾರಿಕೆ ಅವನ ಪ್ರಾಣ ತಿನ್ನುತ್ತಿತ್ತು. ಅದು ಮರುಭೂಮಿ; ನೀರು ಸಿಗದ ಸ್ಥಳ. ಮರಣಶಯ್ಯೆಯಲ್ಲಿದ್ದ ತಮ್ಮ ನೆಚ್ಚಿನ ನಾಯಕನ ಬಾಯಾರಿಕೆ ನೀಗಿಸಲು ಯೋಧರು ಪ್ರಯಾಸದಿಂದ ಬಟ್ಟಲು ನೀರು ತಂದರು. ಸಿಡ್ನಿ ಬಟ್ಟಲನ್ನು ತುಟಿಗೆ ಸೋಕಿಸಬೇಕು. ಅಷ್ಟರಲ್ಲಿ ಪಕ್ಕದಲ್ಲೇ ಪೆಟ್ಟು ತಿಂದು ಬಿದ್ದಿದ್ದ ಶಿಪಾಯಿಯೊಬ್ಬ 'ನೀರು' ಎಂದ. ಸಿಡ್ನಿ ಕರುಣೆಯಿಂದ ಆತನನ್ನು ನೋಡಿ ಆತನ ಕಡೆಗೆ ಬಟ್ಟಲನ್ನು ನೀಡಿ 'ತಮ್ಮ ನನಗಿಂತಲೂ ನಿನಗೆ ಇದರ ಅವಶ್ಯಕತೆ ಹೆಚ್ಚು, ತೆಗೆದುಕೊ, ಎಂದು ಕೊಟ್ಟುಬಿಟ್ಟ. ಈ ರೀತಿಯನ್ನೇ ಗಾಂಧೀಜಿ ಕರ್ತವ್ಯ ಎಂದದ್ದು.

ಮಾನವ ಎಂದು ಸ್ವಾರ್ಥವನ್ನೇ ಮುಂದಾಗಿಟ್ಟುಕೊಂಡು ನೆರೆಯವನನ್ನು ನಿರ್ಲಕ್ಷಿಸಿ ಅಸತ್ಯಮಾರ್ಗದಲ್ಲಿ ನಡೆದು ಎಂದು ಶೋಷಣೆಗೆ ಹೊರಟನೋ

ಅಂದೇ ವಿಶ್ವದಲ್ಲಿ ಬಡತನ ಕಾಲಿಟ್ಟಿತು. ಅದರಿಂದ ಅತೃಪ್ತಿ, ಅಶಾಂತಿ ಬಂತು; ಅದು ನಮ್ಮ ನಮ್ಮಲ್ಲೇ ಜಗಳವನ್ನು ತಂದು ಮಹಾಯುದ್ಧಗಳಿಗೆ ಕಾರಣ ವಾಯಿತು. ನಾವು ಪತನದದಾರಿ ಹಿಡಿದೆವು. ಇದು ಮಾನವನಿಗೆ ಸ್ವಾಭಾವಿಕ ವಾದದ್ದೆಂದು ನಮ್ಮನ್ನು ನಾವೆ ಮೋಸಪಡಿಸಿಕೊಳ್ಳಲು ಪ್ರಾರಂಭಿಸಿದೆವು.

ಒಬ್ಬ ಶಿಪಾಯಿ ಯೇಸು ಕ್ರಿಸ್ತನ ಬಳಿಗೆ ಬಂದು 'ಸ್ವಾಮಿ ನಾನೇನು ಮಾಡಲಿ?' ಎಂದು ಕೇಳಿದ. ಯೇಸು ಅವನಿಗೆ ನಿನ್ನಲ್ಲಿ ಎರಡು ಅಂಗಿ ಇದ್ದರೆ ಇಲ್ಲದವನಿಗೆ ಒಂದು ಕೊಡು ಎಂದು ಬೋಧಿಸಿದ. ಒಬ್ಬ ವ್ಯಾಪಾರಿ ಬಂದು 'ಸ್ವಾಮಿ, ನಾನೇನು ಮಾಡಲಿ?' ಎಂದು ಕೇಳಿದ. ಅವನಿಗೆ 'ನಿನ್ನಲ್ಲಿ ಎರಡು ಹೊತ್ತಿನ ಊಟವಿದ್ದರೆ ಇಲ್ಲದವನಿಗೆ ಒಂದು ಹೊತ್ತಿನದನ್ನು ಕೊಡು' ಎಂದು ಬೋಧಿಸಿದ. ಈ ಮಾರ್ಗ ಸಾಧುಮಾರ್ಗ; ಸತ್ಯಮಾರ್ಗ.

ಗಾಂಧೀಜಿ ಹೇಳುವುದೂ ಅದೆ. ಶ್ರೀಮಂತರೆ, ನಿಮ್ಮಲ್ಲಿರುವ ಐಶ್ವರ್ಯ ನಿಮ್ಮದೆಂದೇ ತಿಳಿಯಬೇಡಿ. ಅದು ಜನರದ್ದು. ನೀವು ಅದರ ಧರ್ಮ ದರ್ಶಿಗಳು ಮಾತ್ರ. ನಿಮಗೆ ಅಗತ್ಯವಿಲ್ಲದುದನ್ನು ಅನುಭವಿಸಿದರೆ ನೀವು ಕಳ್ಳರಾಗುತ್ತೀರಿ. ಅಷ್ಟೇ ಅಲ್ಲ, ನೀವು ಸೋಮಾರಿಗಳಾಗಿ, ಬೆವರು ಸುರಿಸದೆ ಅನ್ನ ತಿಂದರೆ ಅದು ಕದ್ದನ್ನ ತಿಂದಂತಾಗುತ್ತದೆ. ನಿಮ್ಮ ಆಹಾರವನ್ನು ನೀವೆ ಬೆವರು ಸುರಿಸಿ ಗಳಿಸಿ. ಆಗ ನೀವು ನಿರ್ಭಯರಾಗುತ್ತೀರಿ; ಸತ್ಯಸಂಧ ನಾಗುತ್ತೀಯೆ; ಪ್ರೇಮಿಯಾಗುತ್ತೀರಿ. ಆಗ ನೀನು ನಿಜವಾದ ಅರ್ಥದಲ್ಲಿ ಸ್ವತಂತ್ರನಾಗಿದ್ದು ಸುತ್ತಮುತ್ತಲೂ ನಡೆಯುತ್ತಿರುವ ಅಸತ್ಯ, ಅನ್ಯಾಯ, ಅನೀತಿಯನ್ನು ಧೈರ್ಯದಿಂದ ನಿವಾರಿಸುತ್ತೀರಿ. ರಾಮರಾಜ್ಯ ಸ್ಥಾಪನೆಗೆ ಹಾದಿ ಹಾಕುತ್ತೀರಿ.'

ಹೀಗೆ ಗಾಂಧೀಜಿ ಇಷ್ಟು ದಿನವೂ ನಮ್ಮನ್ನು ಪೋಷಿಸಿ ಬೆಳಸಿದ್ದಾರೆ. ನಮಗೆ ಚೇತನವಿತ್ತು, ಕೊಂಚಮಟ್ಟಿಗಾದರೂ ಮಾನವರನ್ನಾಗಿ ಮಾಡಿದ್ದಾರೆ. ಸತ್ಯವನ್ನು ತೋರಿಸಿ, ಅಹಿಂಸೆಯನ್ನು ಬೋಧಿಸಿ ಸೇವೆಯ ಆನಂದದ ಪರಿಚಯ ಮಾಡಿಕೊಟ್ಟು ನಮ್ಮ ಹೃದಯದಲ್ಲಿ ಮಾನವತೆಯ ಬೀಜ ಬಿತ್ತಿದ್ದಾರೆ. ಅದು ಅಂಕುರಿಸಿ ಬೆಳೆದು ಫಲಿಸುವಂತೆ ಮಾಡುವುದು ಈಗ ನಮ್ಮ ಮೇಲೆ ಬಿದ್ದ ಕರ್ತವ್ಯ. ಒಂದು ವರ್ಷದ ಆಯವ್ಯಯವನ್ನು ವರ್ತಕ ನೋಡುವಂತೆ ನಾವು ಈ ಕರ್ತವ್ಯವನ್ನು ಒಂದು ವರ್ಷದಲ್ಲಿ ಎಷ್ಟರಮಟ್ಟಿಗೆ ನಡೆಸಿದೆವೆಂಬುದನ್ನು ಲೆಕ್ಕಹಾಕಿ ನೋಡುವ ನೆಲೆಯಾಗಿ ಮುಂದಿನ ಜಯಂತಿಯನ್ನಾಚರಿಸುವ.

ನಭ.

# ಗಾಂಧಿಜೀಯವರ ತತ್ತ್ವ

**ಕೆ. ಟಿ. ಭಾಷ್ಯಂ**

ಮಹಾತ್ಮ ಗಾಂಧಿಯವರ ಜೀವನಚರಿತ್ರೆಯಿಂದಲು, ಅವರ ಬರವಣಿಗೆ ಭಾಷಣ ಇತ್ಯಾದಿಗಳಿಂದಲು, ಅವರು ಬೋಧಿಸುವ ತತ್ತ್ವ ಏನೆಂಬುದನ್ನು ತಿಳಿಯಬಹುದು. ಅಂದ ಮಾತ್ರಕ್ಕೆ ಅದೇನು ಅಷ್ಟು ಸುಲಭಸಾಧ್ಯವೂ ಅಲ್ಲ. ಗಾಂಧಿಜೀಯವರ ತತ್ತ್ವದ ವಿಷಯವಾಗಿ ಮಾತನಾಡುವುದೆಂದರೆ ನನಗೆ ಒಂದು ಕಥೆ ಜ್ಞಾಪಕಕ್ಕೆ ಬರುತ್ತದೆ. ಒಂದು ಆನೆಯನ್ನು ಆರು ಜನ ಕುರುಡರು ಹೋಗಿ ಮುಟ್ಟಿ ನೋಡಿದರಂತೆ. ಆನೆ ಹೇಗಿದೆ ಎಂದು ಕೇಳಿದಾಗ ಕಾಲನ್ನು ಮುಟ್ಟಿ ನೋಡಿದವನು ಒಂದು ಕಂಬದಂತಿದೆಯೆಂದೂ, ಬಾಲವನ್ನು ಮುಟ್ಟಿ ನೋಡಿದವನು ಒಂದು ಹಗ್ಗದಂತಿದೆಯೆಂದೂ, ಸೊಂಡಲನ್ನು ಮುಟ್ಟಿ ನೋಡಿದವನು ಒಂದು ಒನಕೆಯಂತಿದೆಯೆಂದೂ, ತಾವು ತಾವು ಮುಟ್ಟಿ ನೋಡಿದ ಅಂಗವೇ ಆನೆಯೆಂದು ವರ್ಣಿಸಿದರಂತೆ. ಮಹಾತ್ಮ ಗಾಂಧಿಯವರ ಭವ್ಯಜೀವನದ ಪ್ರಭಾವವನ್ನು ನಾನು ವರ್ಣಿಸುವುದು ಎಂದರೆ ಈ ಕುರುಡರು ಆನೆಯನ್ನು ವರ್ಣಿಸಿದ ಹಾಗೆಯೇ ಸರಿ. ಅಷ್ಟು ಬಹುಮುಖವಾದುದು ಗಾಂಧಿಜೀಯವರ ಜೀವನ. ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ವೈಜ್ಞಾನಿಕ, ಧಾರ್ಮಿಕ, ಇತ್ಯಾದಿ ಎಲ್ಲಾ ಕ್ಷೇತ್ರಗಳಲ್ಲೂ ಅವರು ತಮ್ಮ ಪ್ರಭಾವವನ್ನು ಬೀರಿದ್ದಾರೆ. ಬಡವರಿಗೂ ಭಾಗ್ಯವಂತರಿಗೂ, ಪಂಡಿತರಿಗೂ ಪಾಮರರಿಗೂ, ಪುರುಷರಿಗೂ ಸ್ತ್ರೀಯರಿಗೂ, ಆಬಾಲವೃದ್ಧರಿಗೂ ಮತ್ತೆಲ್ಲರಿಗೂ ಅವರು ಮಾರ್ಗದರ್ಶಕರಾಗಿದ್ದಾರೆ. ಅವರ ಭಾಷಣ ಬರವಣಿಗೆ ಅಂದರೆ ಭಗವದ್ಗೀತೆಯಂತೆ ಸಮಸ್ತರಿಗೂ ಬೋಧಪ್ರದವಾದುದು. ಸಮುದ್ರದಲ್ಲಿ ಮುಳುಗಿದಷ್ಟೂ ಮಾಣಿಕ್ಯಗಳು ಸಿಕ್ಕುವಂತೆ ಅವರ ಜೀವನ ಚರಿತ್ರೆಯನ್ನೂ ಭಾಷಣ ಬರವಣಿಗೆಯನ್ನೂ ಮನನಮಾಡಿದಷ್ಟೂ ಜ್ಞಾನ ವಿಕಾಸವಾಗುತ್ತದೆ. ಅಂದಮೇಲೆ ಗಾಂಧಿಜೀಯವರ ತತ್ತ್ವವನ್ನು ನಿರ್ದಿಷ್ಟವಾಗಿ ಇಷ್ಟೆ ಎಂದು ಹೇಳುವುದು ಕಷ್ಟಸಾಧ್ಯವೇ ಸರಿ. ಅವರ ವ್ಯಕ್ತಿತ್ವ ಅಂತಹುದು. ಪೂರ್ಣ ವ್ಯಕ್ತಿತ್ವ. ವಿರಾಡ್ರೂಪ.

ಆದರೂ ಗಾಂಧೀಜಿ ಎಂದಕೂಡಲೆ ನಮ್ಮ ಮನಸ್ಸಿನಲ್ಲಿ ಬರುವ ಭಾವನೆ ಅವರ ಪ್ರೇಮಪೂರಿತ ವಾತ್ಸಲ್ಯ, ಕ್ಷಮಾಗುಣ, ಅಪಾರ ದಯೆ. ಲೋಕವೆಲ್ಲವೂ ಒಂದೇ ಸಂಸಾರ. ಮನುಷ್ಯರೆಲ್ಲರೂ ಒಂದೇ ಮನೆತನದವರು ಅಣ್ಣ ತಮ್ಮಂದಿರು. ಹಿಂದುಗಳಾಗಲಿ, ಮುಸಲ್ಮಾನರಾಗಲಿ, ಭಾರತೀಯರಾಗಲಿ, ಬ್ರಿಟಿಷರಾಗಲಿ ಒಂದೇ ಕುಟುಂಬದವರು. ಒಬ್ಬರನ್ನೊಬ್ಬರು ಪ್ರೀತಿಸಬೇಕು. ವೈಷಮ್ಯಗಳು, ಭೇದಭಾವಗಳು, ಎಲ್ಲವನ್ನೂ ತೊಳೆದುಹಾಕಬೇಕು. ಒಬ್ಬರನ್ನೊಬ್ಬರು ವೈರಿಗಳಂತೆ ಪೀಡಿಸುವುದು ಅಜ್ಞಾನ. ಮೇಲು ಕೀಳೆಂಬ ಭಾವನೆಗಳು ತಪ್ಪು. ಎಲ್ಲರೂ ಭಗವಂತನ ಮಕ್ಕಳು, ಸಮಾನರು, ಸಹೋದರರು. ಲೋಕದಲ್ಲಿ ಅನೇಕ ವ್ಯತ್ಯಾಸಗಳು ಕಾಣುತ್ತವೆ. ಅವುಗಳನ್ನು ಸರಿಪಡಿಸುವುದಕ್ಕೆ ಮಾರ್ಗ ಅಹಿಂಸಾ ಪ್ರೇಮ. ಪರಾಕ್ರಮವಾಗಲಿ, ಹಗೆತನವಾಗಲಿ ಅಲ್ಲ. ಹಿಂಸೆಯಿಂದ ಹಗೆತನವು ಹೆಚ್ಚುತ್ತದೆಯೇ ಹೊರತು ಕಡಮೆಯಾಗುವದಿಲ್ಲ. ಲೋಕದಲ್ಲಿ ಹಿಂಸೆ ಮಾಡುವವರಿದ್ದಾರೆ. ತಪ್ಪು ಮಾಡದವರೇ ಇಲ್ಲ. ಎಲ್ಲರೂ ಒಂದಲ್ಲ ಒಂದು ತಪ್ಪು ಮಾಡಿಯೇ ಮಾಡುತ್ತಾರೆ. ಸರ್ವಜ್ಞರು ಯಾರೂ ಇಲ್ಲ. ಈ ತಪ್ಪುಗಳನ್ನೂ, ಹಿಂಸಾಕೃತ್ಯಗಳನ್ನೂ ತಿದ್ದಬೇಕಾದರೆ, ಪ್ರೇಮ ಒಂದರ ವಿನಹ ಇನ್ನಾವ ಮಾರ್ಗವೂ ಇಲ್ಲ. ಇದೇ ಗಾಂಧಿಜೀಯವರ ತತ್ತ್ವ.

ಇದೇನು ಹೊಸದಲ್ಲ. ನಮ್ಮ ಪೂರ್ವಿಕರು "ಅಹಿಂಸಾ ಪರಮೋ ಧರ್ಮಃ" ಎಂದು ಹೇಳುತ್ತಿದ್ದಾರಷ್ಟೆ. ಅದನ್ನೇ ಪುನಃ ನಮ್ಮ ಜೀವಿತದಲ್ಲಿ ತರಬೇಕೆಂಬುದು ಮಹಾತ್ಮಾಜಿಯವರ ಗುರಿ. ಇದು ಕೇವಲ ಮನುಷ್ಯವರ್ಗಕ್ಕೆ ಮಾತ್ರ ಅನ್ವಯಿಸಿದ್ದಲ್ಲ. ಭಗವಂತನ ಸೃಷ್ಟಿಯಲ್ಲಿ ಮನುಷ್ಯನು ಹೇಗೋ ಹಾಗೆಯೆ ಪ್ರಾಣಿವರ್ಗವು, ಜೀವಜಂತುಗಳು, ಸಸ್ಯಾದಿ ಜೀವಗಳು, ಜಡ ಪದಾರ್ಥಗಳು ಎಲ್ಲವೂ ಒಂದೇ ಕುಟುಂಬಕ್ಕೆ ಸೇರಿದುವು. ಭಗವಂತನು ಮನುಷ್ಯನಿಗೆ ಜ್ಞಾನವನ್ನು ಕೊಟ್ಟಿದ್ದಾನೆ. ಅದರ ದೆಸೆಯಿಂದ "ಸರ್ವಂಬ್ರಹ್ಮ ಮಯಂ ಜಗತ್" ಎಂಬುದನ್ನರಿತು ಎಲ್ಲರನ್ನು, ಎಲ್ಲವನ್ನು ಮನುಷ್ಯನು ಪ್ರೀತಿಸಬೇಕು. ಪ್ರೇಮದಿಂದ ಆದರಿಸಬೇಕು. ಇತರರನ್ನು ತನ್ನಂತೆ ನೋಡಬೇಕು. ಇತರರ ಸುಖದಲ್ಲಿ ತನ್ನ ಸಂತೋಷವನ್ನು ಹೊಂದಬೇಕು. ನಾನು ನನ್ನದು ಎಂಬುವ ಭಾವನೆಯನ್ನು ತೊರೆದು, ಸಕಲರಲ್ಲಿಯೂ, ಸಕಲ ವಸ್ತುಗಳಲ್ಲಿಯೂ ತನ್ನನ್ನು ಕಾಣಬೇಕು. ಎಲ್ಲರಿಗೂ ಸೇವೆಯನ್ನು ಸಲ್ಲಿಸುವುದೇ ತನ್ನ ಸೌಭಾಗ್ಯವೆಂದು ಅರಿಯಬೇಕು. ಇದು ಗಾಂಧಿಜೀಯವರ ತತ್ತ್ವ.

ಇದನ್ನು ತಿಳಿಯದವರಿಲ್ಲ. ಆದರೂ ಆಚರಿಸುವವರು ಕಡಮೆ. ಇದೇನು ಆಶ್ಚರ್ಯವಲ್ಲ.

ಮನುಷ್ಯನಿಗೆ ಕೋಪತಾಪಗಳು, ಮಮತೆ, ಅಹಂಕಾರ, ಅಸೂಯೆ, ಇತ್ಯಾದಿ ಅರಿಷಡ್ವರ್ಗಗಳು ಸ್ವಾಭಾವಿಕವಾಗಿ ಇರುತ್ತವೆ. ಅವುಗಳನ್ನು ನಿಗ್ರಹಿಸಿದ ಹೊರತು ಆತನು ಎಲ್ಲರಲ್ಲೂ ಪ್ರೇಮಪೂರಿತನಾಗಲಾರನು. ಎದುರಾಳಿಯಲ್ಲಿ ಕ್ಷಮಾಗುಣವನ್ನು ತೋರಲಾರನು. ದಕ್ಷಿಣ ಆಫ್ರಿಕದಲ್ಲಿ ಒಂದು ಸಲ ಮಹಾತ್ಮ ಗಾಂಧಿಯವರನ್ನು ಕೆಲವು ದುರಾತ್ಮರು ಜ್ಞಾನ ತಪ್ಪುವಷ್ಟು ಕ್ರೂರವಾಗಿ ಹೊಡದುಬಿಟ್ಟರು. ಕೆಲವು ದಿನಗಳಾದ ಮೇಲೆ ಪೋಲೀಸರು ದುಷ್ಟರನ್ನು ಹಿಡಿದು ಮೊಕದ್ದಮೆ ಹೂಡಿದಾಗ ಗಾಂಧೀಜಿಯವರು ಅದನ್ನು ತಡೆದು "ಅವರು ಅಜ್ಞಾನದಿಂದ ನನ್ನನ್ನು ಹೊಡೆದರು. ಅವರನ್ನು ಶಿಕ್ಷಿಸುವುದರಿಂದ ಅವರಿಗೆ ಹಿಂಸೆಯಾದೀತೇ ವಿನಹ ಅವರು ಉತ್ತಮರಾಗಲಾರರು ಅವರನ್ನು ಕ್ಷಮಿಸಿ ಪ್ರೀತಿಸುವುದರಿಂದ ಅವರು ಉತ್ತಮರಾದಾರು" ಎಂದು ಹೇಳಿ ಅವರನ್ನು ಬಿಡಿಸಿಬಿಟ್ಟರು. ಅಂದಿನಿಂದ ಆಪಾದಿತ ಗಾಂಧಿಜೀಯ ಶಿಷ್ಯರಾದರು. ಇಂತಹ ಕ್ಷಮಾಗುಣವನ್ನು ಹೊಂದುವುದು ಕಷ್ಟ. ದಮನ ಶಮನಾದಿಗಳಿಂದ ಇಂದ್ರಿಯನಿಗ್ರಹವನ್ನು ಮಾಡಿ, ಎಲ್ಲರಲ್ಲೂ ಪ್ರಶಾಂತ ಹೃದಯದಿಂದ ಪ್ರೇಮಾತಿಶಯ ಸದ್ಗುಣಗಳನ್ನು ಬೀರುವುದೇ ಗಾಂಧೀಜೀಯ ತತ್ತ್ವದ ಮಾರ್ಗ. ಹೆತ್ತ ತಾಯಿಯು ಪೀಡಿಸುವ ಮಗುವನ್ನು ಹೊಡೆದಾಳು ಆದರೆ ಎಷ್ಟೇ ನೋವುಂಟುಮಾಡಿದವರಿಗೂ ಗಾಂಧಿಜೀಯವರು ಒಂದು ಕಠಿನ ಶಬ್ದವನ್ನು ಆಡಿದವರಲ್ಲ. ಅಷ್ಟು ಪ್ರೇಮಪೂರಿತವಾದ ಹೃದಯ ಅವರದು.

ಪ್ರೇಮದಿಂದ ದುಷ್ಟರನ್ನು ಶಿಷ್ಟರನ್ನಾಗಿ ಮಾಡಬಹುದೆಂದು ತೋರಿಸಿಕೊಟ್ಟರು. ಹಿಂದೊಮ್ಮೆ ಅಹಲ್ಯೆಯು ಕಲ್ಲಾದಳೆಂದೂ ರಾಮಪಾದ ಸ್ಪರ್ಶದಿಂದ ಕಲ್ಲು ಮತ್ತೆ ಚಿಗುರಿ ಜೀವವಾಯಿತೆಂದೂ ಕೇಳಿದ್ದೇವಷ್ಟೆ. ಅಂತೆಯೆ ಇಂದೂಸಹ ದುಷ್ಟರ ದೌರ್ಜನ್ಯವನ್ನು ಹೋಗಲಾಡಿಸಲು ಪ್ರೇಮದ ಸ್ಪರ್ಶವಾಗಬೇಕು. ವಾತ್ಸಲ್ಯದ ಅನುಭವವಾಗಬೇಕು. ಇದು ಗಾಂಧಿಯವರ ತತ್ತ್ವ.

ಈ ಪ್ರೇಮವು ಒಂದೊಂದು ಕ್ಷೇತ್ರದಲ್ಲಿ ಒಂದೊಂದು ರೂಪವನ್ನು ತಾಳುತ್ತದೆ. ಸಮಾಜದಲ್ಲಿರತಕ್ಕ ನ್ಯೂನತೆಗಳನ್ನು ಹೋಗಲಾಡಿಸಲು, ಧೈರ್ಯ, ಕಷ್ಟಸಹಿಷ್ಣುತೆ, ತ್ಯಾಗ, ಇತ್ಯಾದಿ ಗುಣಗಳನ್ನು ಬೆಳೆಸುತ್ತದೆ. ರಾಜಕೀಯದಲ್ಲಿ ಎದುರಾಳಿಯನ್ನು ಗೌರವದಿಂದ ಕಾಣುವ ಕ್ಷಣದಲ್ಲೇ ಆತನನ್ನು ಎದುರಿಸಿ ಅನ್ಯಾಯವನ್ನು ತಡೆಗಟ್ಟುವ ಸತ್ಯಾಗ್ರಹ ರೂಪವನ್ನು

ತಾಳುತ್ತದೆ. ಮೂಕಪ್ರಾಣಿಗಳಿಗೆ ಹಿಂಸೆಯಾಗದಂತೆ ಅವುಗಳ ರಕ್ಷಣೆಗೆ ನೆರವಾಗುತ್ತದೆ. ಮಹಾತ್ಮ ಗಾಂಧಿಯವರು ಹಸುವನ್ನು ಪುನಃ ಮಾತೃ ಸ್ಥಾನಕ್ಕೆ ತಂದರು. ಯಾವ ಕ್ಷೇತ್ರದಲ್ಲೇ ಆಗಲಿ ಅನ್ಯಾಯವನ್ನು ಪ್ರತಿಭಟಿಸುವ ಧೀರತ್ವವನ್ನು ಬೆಳೆಸುತ್ತದೆ. ಹೆಣ್ಣುಮಕ್ಕಳು ಅವಿದ್ಯಾವಂತರಾಗಿ ಕೀಳುಭಾವನೆಯಿಂದ ತುಳಿಯಲ್ಪಡುತ್ತಿರುವುದನ್ನು ಹೋಗಲಾಡಿಸಿ ಅವರಿಗೆ ಸಮಾಜದಲ್ಲಿ ಪುನಹ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟರು ಮಹಾತ್ಮ ಗಾಂಧಿ. ಅಸ್ಪೃಶ್ಯರೆನಿಸಿದ ಕೋಟಿಯಾಂತರ ಜನರಿಗೆ ಸಮಾಜದಲ್ಲಿ ಇತರರೊಂದಿಗೆ ಸಮಾನವಾದ ಹಕ್ಕುಬಾಧ್ಯತೆಗಳನ್ನು ಗಳಿಸಿಕೊಟ್ಟರು. ಮದ್ಯಪಾನದಿಂದ ವಿನಾಶಕ್ಕೆ ಗುರಿಯಾಗುತ್ತಿದ್ದ ಬಡವರನ್ನು ಸುಶೀಲರಾಗಿ ಮಾಡಿ ಸಂಪದ್ಯುಕ್ತರನ್ನಾಗಿ ಮಾಡಿದರು. ಕಾರ್ಮಿಕರು ದುಡಿಯುವುದರಿಂದ ಮಾಲೀಕರು ಧನಿಕರಾಗುವುದನ್ನು ನೋಡಿ ಕಾರ್ಮಿಕರ ರಕ್ಷಣೆಗೆ ಬೇಕಾದ ಸಲಹೆಗಳನ್ನು ಸೂಚಿಸಿದರು. ಶಕ್ತಿವಿಹೀನರಾದ ಭಾರತೀಯರಲ್ಲಿ ಧೈರ್ಯ ಸ್ಥೈರ್ಯಾದಿಗಳನ್ನು ತುಂಬಿಸಿ ಅಹಿಂಸಾ ಮಾರ್ಗಾನುವರ್ತಿಗಳಾಗಿ ಸ್ವರಾಜ್ಯ ಸಂಪಾದಿಸುವಂತೆ ಮಾಡಿಕೊಟ್ಟರು. ವೈಯುಕ್ತಿಕವಾಗಲಿ, ಸಾಮಾಜಿಕವಾಗಲಿ, ರಾಷ್ಟ್ರೀಯವಾಗಲಿ, ಅಂತರ್ರಾಷ್ಟ್ರೀಯವಾಗಲಿ—ಎಲ್ಲೇ ಆದರೂ ಯಾವ ವ್ಯತ್ಯಾಸ ಮನೋಭಾವನೆಗಳು ಬಂದರೂ ಅವುಗಳನ್ನು ಅಹಿಂಸಾ ರೀತಿಯಲ್ಲಿ, ಪ್ರೇಮಪೂರಿತವಾಗಿ ಪರಿಹರಿಸಲು ಸಾಧ್ಯ, ಮತ್ತು ಹಾಗೆ ಸಹೋದರಭಾವದಿಂದ ವರ್ತಿಸುವುದೊಂದೇ ಸರಿಯಾದ ಮಾರ್ಗ ಮತ್ತು ಶಾಶ್ವತ ಫಲದಾಯಕವಾದುದೆಂದು ನಿರೂಪಿಸಿಕೊಟ್ಟಿರುತ್ತಾರೆ.

ಇದೂ ಸಹ ಏನೂ ಹೊಸದಲ್ಲ. ಹಿಂದೆ ಪ್ರಹ್ಲಾದ ಚರಿತ್ರೆಯಲ್ಲಿ ಅಡಕವಾಗಿರುವ ತತ್ತ್ವವೇ ಇದು. ಈಚೆಗೆ ಬುದ್ಧ ಮತ್ತು ಜೀಸಸ್ ಕ್ರೈಸ್ತರ ಜೀವನ ಚರಿತ್ರೆಯಲ್ಲಿ ಅಡಕವಾಗಿರುವ ತತ್ತ್ವವೂ ಇದೇ. ಮಹಾತ್ಮಾ ಗಾಂಧಿಯವರು ಈ ತತ್ತ್ವವನ್ನು ಪ್ರತಿಕ್ಷಣದಲ್ಲೂ ಆಚರಿಸಿ ಲೋಕಕ್ಕೆ ಮಾರ್ಗದರ್ಶಕರಾದರು.

ಇದನ್ನು ನಾವು ಅರಿತರೆ, ಈ ಅಹಿಂಸಾ ಪ್ರೇಮಮಯ ಜೀವನವನ್ನು ನಾವು ಆಚರಿಸಲು ಪ್ರಯತ್ನಪಟ್ಟರೆ ಅದೇ ನಾವು ಗಾಂಧೀಜೀಯವರಿಗೆ ಸಲ್ಲಿಸುವ ಕಾಣಿಕೆಯಾದೀತು. ಆಗ ನಮಗೆ ಜೀವನದ ಮಾರ್ಗದಲ್ಲಿ ಬೆಳಕು ಕಾಣುತ್ತದೆ. ಹಿಂಸೆಯು ತಪ್ಪು, ದ್ವೇಷವು ತಪ್ಪು, ಪ್ರೀತಿಯೇ ಸರಿ ಎನ್ನುವುದು ಗೋಚರವಾಗುತ್ತದೆ. ಕುರುಡನಾದವನು ಎಡವಿಬಿದ್ದರೆ ಕಣ್ಣುಕಾಣುವ ನಾವು ಆತನನ್ನು ಎತ್ತಿ ದಾರಿ ತೋರಿಸುವುದು ಧರ್ಮವೋ ಆತನನ್ನು ದೂಷಿಸುವುದು ಧರ್ಮವೋ ? ಹಾಗೆಯೆ ಅನೇಕ ಜ್ಞಾನಹೀನರೂ

ತಪ್ಪುಮಾಡುತ್ತಾರೆ. ಅವರನ್ನು ಸುಧಾರಿಸಿ ನ್ಯಾಯಮಾರ್ಗಕ್ಕೆ ಕರೆತರಬೇಕು. ಇದಕ್ಕೆ ಅಪಾರ ಪ್ರೇಮ, ಸಹನೆ. ಇತ್ಯಾದಿ ಸದ್ಗುಣಗಳು ಬೇಕು. ಅವುಗಳನ್ನೆಲ್ಲಾ ನಾವು ನಮ್ಮಲ್ಲಿ ಬೆಳೆಸಿಕೊಳ್ಳಬೇಕು.

ಕೇವಲ ಭೋಗಲಾಲಸೆಗಳಿಂದ ದುರ್ಗುಣಗಳೇ ಬೆಳೆಯುತ್ತವೆ. ಆದಕಾರಣ ಇಂದ್ರಿಯನಿಗ್ರಹಕ್ಕೆ ಅನುಗುಣವಾದ ಸರಳ ಜೀವನವನ್ನು ನಡೆಸಬೇಕು. ನಡೆಯಲ್ಲಿ, ನುಡಿಯಲ್ಲಿ ಸಹಜವಾದ ನಯ ವಿನಯಾದಿಗಳಿಂದ ಕೂಡಿದವರಾಗಿರಬೇಕು. ಸತ್ಯಕ್ಕೆ ಸೊಂಟಕಟ್ಟಿ ನಿಲ್ಲಬೇಕಾದ ನಿರ್ಭೀತ ಮನೋಭಾವ ಬರಬೇಕಾದರೆ ಸರಳಜೀವನದಿಂದಲ್ಲದೆ ಬೇರೆ ಮಾರ್ಗವಿಲ್ಲ.

ಅಲ್ಲದೆ ಎಲ್ಲರೂ ಸುಖದಿಂದ ಬಾಳಬೇಕೆಂಬ ಮನೋಭಾವವಿರುವವರು ತಮಗೆಷ್ಟು ಬೇಕೋ ಅದಕ್ಕೆ ಹೆಚ್ಚಾಗಿ ಶೇಖರಿಸಿದರೆ ಅಥವ ಸ್ವೀಕರಿಸಿದರೆ ಇತರರಿಗೆ ಉಪಯುಕ್ತ ಮತ್ತು ಆವಶ್ಯಕವಾಗಿರುವುದನ್ನು ಅಪಹರಿಸಿ ಅವರಿಗೆ ಇಲ್ಲದಂತೆ ಮಾಡಿ ಹಿಂಸೆಯನ್ನುಂಟುಮಾಡಿದ ಹಾಗಾಗುತ್ತದೆ. ಅದೊಂದು ರೀತಿಯ ದೌರ್ಜನ್ಯವಾಗುತ್ತದೆಂದು ಗಾಂಧಿಜೀಯವರ ಅಭಿಪ್ರಾಯ.

ಇತರರಿಗೆ ನೋವನ್ನುಂಟುಮಾಡದಿದ್ದರೆ ಅಷ್ಟಕ್ಕೆ ಅಹಿಂಸೆಯಾಗಲಾರದು. ಎಲ್ಲರಿಗೂ ನೋವುಗಳೇನಿದ್ದರೂ ಅವುಗಳನ್ನು ಪರಿಹರಿಸಿ ಎಲ್ಲರೂ ಸಂತುಷ್ಟರಾಗಿರುವಂತೆ ಪ್ರಯತ್ನಿಸುವ ವಿಶ್ವಪ್ರೇಮವೆ ಅಹಿಂಸೆಯು. ಲೋಕದಲ್ಲಿ ಭೇದಭಾವಗಳಿಂದ ವೈಷಮ್ಯಗಳು ಹುಟ್ಟುತ್ತವೆ. ಅಂತಹ ಭೇದಭಾವಗಳನ್ನು ಹೋಗಲಾಡಿಸಬೇಕು. ಮಹಾತ್ಮಾ ಗಾಂಧೀಯವರು ಸದಾಕಾಲದಲ್ಲೂ ಇದರಲ್ಲಿ ನಿರತರಾಗಿದ್ದರು. ಭೇದಭಾವದಿಂದ ವೈಷಮ್ಯ, ವೈಷಮ್ಯದಿಂದ ಭಯ ಭೀತಿಗಳು, ಭಯ ಭೀತಿಗಳಿಂದ ಹಿಂಸಾಕೃತ್ಯ, ಹಿಂಸೆಯಿಂದ ಪ್ರತಿಹಿಂಸೆ ಹೀಗೆ ಇದರ ಪರಂಪರೆ. ಇದನ್ನು ಗಾಂಧಿಜೀಯವರು ಅರಿತವರಾಗಿ ಮಾನವ ವರ್ಗದಲ್ಲಿ ಎಲ್ಲರೂ ನಿರ್ಭೀತರಾಗಿ ಸಮಾನಸ್ಥರಾಗಿ ಬಾಳುವಂತೆ ಬೋಧಿಸಿದರು.

ಅಂತರಾಷ್ಟ್ರೀಯ ಆರ್ಥಿಕಕ್ಷೇತ್ರದಲ್ಲಿ ಇದು ಪ್ರಾಮುಖ್ಯವಾಗಿ ಕಾಣುತ್ತದೆ. ಪ್ರತಿ ಒಂದು ದೇಶವೂ ತನ್ನ ಹೊಟ್ಟೆ ಬಟ್ಟೆ ಇತ್ಯಾದಿಗಳನ್ನು ತಾನೇ ನೋಡಿಕೊಳ್ಳಬೇಕು, ಇನ್ನೊಬ್ಬರ ಬಾಗಿಲು ಕಾಯಬಾರದು. ಗೌರವದಿಂದ ರಾಷ್ಟ್ರಗಳು ಪರಸ್ಪರ ಸಹಾಯ ಮಾಡಬಹುದಾದರೂ ಒಂದು ದೇಶ ಮತ್ತೊಂದು ದೇಶದ ಆಕ್ರಮಣದಿಂದ ಬದುಕುವುದನ್ನು ತಡೆಗಟ್ಟಬೇಕು. ಹೀಗಾಗಬೇಕಾದರೆ ಹಳ್ಳಿಗಳು ಸ್ವಪರಿಪೂರ್ಣತೆಯಿಂದ ಕೂಡಿರಬೇಕು. ವ್ಯಕ್ತಿಗಳು, ರಾಷ್ಟ್ರಗಳು ಸ್ವಾವಲಂಬಿಗಳಾದರೆ ಧೈರ್ಯತುಂಬಿದವರಾಗುತ್ತಾರೆ. ಪರಾವಲಂಬಿಗಳಾದರೆ ದಾಸರಾಗುತ್ತಾರೆ. ದಾಸ್ಯದಲ್ಲಿ ಸದ್ಗುಣಗಳು ಬೆಳೆಯು

ವುದಿಲ್ಲ. ಸತ್ಯವನ್ನು ಕಾಪಾಡುವ ಶಕ್ತಿಯಿರುವುದಿಲ್ಲ. ಅಸತ್ಯವನ್ನೂ, ಅನ್ಯಾಯ ವನ್ನೂ ತಡೆಗಟ್ಟುವ ದಿಟ್ಟತನವಿರುವುದಿಲ್ಲ. ಸ್ವಾವಲಂಬನೆಯಿಂದಲೇ ಧರ್ಮ ಪರಿಪಾಲನೆಯಾಗಬೇಕಾದರೆ. ಇದಕ್ಕಾಗಿಯೆ ಮಹಾತ್ಮರು ಚರಖವನ್ನು ತಮ್ಮ ತತ್ವಕ್ಕೆ ಕೇಂದ್ರಸ್ಥಾನವಾಗಿ ಮಾಡಿದರು. ಚರಕವು ಸ್ವಾವಲಂಬನೆಯ ಹೆಗ್ಗುರುತು. ಗ್ರಾಮೋದ್ಯೋಗಕ್ಕೆ ಕೇಂದ್ರಸ್ಥಾನ. ಹಳ್ಳಿಗಾಡಿನವರು ತಮ್ಮ ತಮ್ಮ ಮನೆಗಳಲ್ಲಿ ಮತ್ತೆ ಗ್ರಾಮಗಳಲ್ಲಿ ಕೈಗಾರಿಕಾಭಿವೃದ್ಧಿಯಿಂದ ಸಂಪಾದಿ ಸಲು ಶಕ್ತರಾಗಿ, ವ್ಯವಸಾಯವನ್ನು ಉತ್ತಮರೀತಿಯಲ್ಲಿ ನಡೆಸುತ್ತಾ ಸಂತುಷ್ಟರಾದರೆ, ದೇಶಾಭ್ಯುದಯವಾಗುತ್ತದೆಯಲ್ಲದೆ, ಅಂತಹ ದೇಶದ ಮೇಲೆ ಯಾರೂ ದಂಡಯಾತ್ರೆ ಮಾಡುವಂತಿಲ್ಲ. ಈಗಿನ ಸಾಮ್ರಾಜ್ಯಶಾಹೀ ರಾಷ್ಟ್ರ ಗಳ ವೈಷಮ್ಯಗಳಿಗೆ ಅವಕಾಶವೇ ಇರುವುದಿಲ್ಲ. ಲೋಕದಲ್ಲಿ ಯುದ್ಧಕ್ಕೆ ಕಾರಣವೇ ಇರುವುದಿಲ್ಲ. ಯುದ್ಧದಿಂದ ಪ್ರಯೋಜನವೇ ಇರುವುದಿಲ್ಲ. "ಸರ್ವೇಜನಾಸ್ಸುಖಿನೋಭವಂತು" ಎಂದು ಪೂರ್ವಿಕರು ಹೇಳುತ್ತಿದ್ದುದು ಕಾರ್ಯತಃ ಸಾಧಿಸಿದಂತಾಗುತ್ತದೆ.

ಇವೆಲ್ಲಕ್ಕೂ ಪ್ರೇಮಪೂರಿತವಾದ ಗಾಂಧಿಯವರ ತತ್ವವೇ ಮೂಲಾಧಾರ. ಈ ತತ್ವವು ಶಾಂತಿಮಯವಾದದ್ದು. ಅಂತೆಯೆ ಕ್ರಾಂತಿಮಯವಾದದ್ದೂ ಹೌದು. ಪ್ರೇಮವು ಕ್ರಾಂತಿಯುತವಾಗಿ ಲೋಕವನ್ನೇ ಆವರಿಸಿ, ಅಸತ್ಯ ವನ್ನೂ ಅನ್ಯಾಯವನ್ನೂ ಹೋಗಲಾಡಿಸುತ್ತದೆ ಮತ್ತು ಮಾನವಕೋಟಿಯಲ್ಲಿ ಶಾಂತಿಯನ್ನು ಸ್ಥಾಪಿಸುತ್ತದೆ. ಅದೇ ರೀತಿಯಲ್ಲಿ ಗಾಂಧೀಜೀಯವರ ತತ್ವ ವನ್ನು ಪಾಲಿಸುವವರು ಸಮಾಜದ ಮತ್ತು ವ್ಯಕ್ತಿಗಳ ನ್ಯೂನತೆಗಳನ್ನು ಹೋಗಲಾಡಿಸಿ, ಸಮಾಜದ ಏಳಿಗೆಯನ್ನು, ವ್ಯಕ್ತಿಗಳ ಘನತೆ, ಗಾಂಭೀರ್ಯ, ಸುಖಸಂತೋಷಗಳನ್ನು ಹೆಚ್ಚಿಸುತ್ತಾ, ದೇಶಸೇವೆಯಲ್ಲಿ ಈಶಸೇವೆಯನ್ನು ಕಾಣುತ್ತಾ, ತಾವು ಕೃತಾರ್ಥರಾಗಿ ಲೋಕಕಲ್ಯಾಣಕ್ಕೂ ಕಾರಣಕರ್ತ ರಾಗುತ್ತಾರೆ. ಅಂತಹವರ ಸಂಖ್ಯೆ ಹೆಚ್ಚಿದಷ್ಟೂ ಲೋಕದಲ್ಲಿ ಸತ್ಯ, ಶಾಂತಿ, ಸುಖ, ಸಂತೋಷಗಳು ಹೆಚ್ಚುತ್ತವೆ. ಪ್ರಪಂಚದ ಈಗಿನ ಚಿಂತಾಜನಕವಾದ ಸ್ಥಿತಿಗೆ ಗಾಂಧೀಜೀಯವರ ತತ್ವವೇ ಪರಮೌಷಧಿ. ಅದನ್ನು ಲೋಕಕ್ಕೆ ಕೊಡತಕ್ಕ ಶಕ್ತಿ ಮತ್ತು ಹಕ್ಕು ಭಾರತೀಯರದು. ಅಂತಹ ಶಕ್ತಿಯನ್ನು ಭಗವಂತನು ನಮಗೆ ದಯಪಾಲಿಸಿ ಲೋಕಕಲ್ಯಾಣಕ್ಕೆ ನಾವು ಕಾರಣಕರ್ತ ರಾಗುವಂತೆ ಮಾಡಲೆಂಬುದೇ ನನ್ನ ಕೋರಿಕೆ.

# ಗಾಂಧೀ—ಸರ್ವ !

ಜಿ. ಪಿ. ರಾಜರತ್ನಂ

" Gandhiji as an international figure "—ಇದು ನಾನು ಈ ಸಂಜೆ ಮಾತನಾಡಬೇಕಾದ ವಿಷಯ. International figure ಎಂದರೆ 'ರಾಷ್ಟ್ರ ರಾಷ್ಟ್ರಗಳಲ್ಲೂ ಅಂತರ್ಯಾಮಿಯಾಗಿ ಸೇರಿಹೋಗಿರುವ ವ್ಯಕ್ತಿ' ಎಂದು ಅರ್ಥ ವಾಗುತ್ತದೆ. ಆದರೆ ಈ ದಿವಸ international figures ಆಗಿದ್ದು ಹೋದ ಹಿಟ್ಲರ್, ಮುಸ್ಸೊಲಿನಿ, ಆಗಿರುವ ಚರ್ಚಿಲ್, ಸ್ಟಾಲಿನ್ ಮುಂತಾದ ಮಹಾನು ಭಾವರಿಂದ ಆ ಪದಕ್ಕೇ ಒಂದು ಅನ್ವಾರ್ಥ, ಒಂದು ಅನ್ಯಾಯದ ಅರ್ಥ, ಬಂದುಹೋಗಿದೆ. ಆದಕಾರಣ, ಗಾಂಧಿಯವರನ್ನು ಈ ವಿಶೇಷಣದಿಂದ ವರ್ಣಿಸುವುದಕ್ಕೆ ಮನಸ್ಸುಬಾರದು.

ಈ International ಎಂಬ ವ್ಯಕ್ತಿಗಳನ್ನು ಒಳ್ಳೆಯ ಅರ್ಥದಲ್ಲಿಯೇ ಕಲ್ಪಿಸಿ ಕೊಂಡರೂ, ಇಲ್ಲಿಯೂ ಎರಡು ತೆರ ಉಂಟು: ಎಲ್ಲಾ ರಾಷ್ಟ್ರಗಳವರೂ ನಮ್ಮವರೇ ಎಂದು ಭಾವಿಸುವವರು ಕೆಲವರು; ಎಲ್ಲಾ ರಾಷ್ಟ್ರದವರಿಂದಲೂ 'ಇವರೂ ನಮ್ಮವರೇ' ಎಂಬ ಭಾವನೆಗೆ ಪಾತ್ರರಾದವರು ಕೆಲವರು. ಈ ಎರಡೂ ರೀತಿಯ ಪಾತ್ರತ್ವ ಗಾಂಧಿಯವರಲ್ಲಿ, ಬೇರೆ ಯಾರಲ್ಲಿಯೂ ಗೋಚರವಾಗದಷ್ಟು ಹೆಚ್ಚಿನ ಪರಿಮಾಣದಲ್ಲಿ, ಸಮ್ಮಿಲನವಾಗಿತ್ತು ಎಂಬು ದಕ್ಕೆ—ಗಾಂಧಿಯವರು ತಮ್ಮ ಬದುಕಿನ ಉದ್ದಕ್ಕೂ ತಾವು ನಡೆದು ನುಡಿದ ರೀತಿಯನ್ನೂ ಅವರು ಮರಣಪಟ್ಟಾಗ ಪ್ರಪಂಚದ ಮೂಲೆ ಮೂಲೆಗಳಿಂದಲೂ ಕೇಳಿಬಂದ ಕರುಳಿನ ಕೂಗನ್ನೂ ಸಮರ್ಥವಾದ ಸಾಕ್ಷಿಯಾಗಿ ಗಣಿಸಬಹುದು.

ಹೀಗೆ ಸಮಸ್ತ ಪ್ರಪಂಚಕ್ಕೂ ಸೇರಿದವರಾದ ಮಹಾಜೀವಗಳನ್ನು ನಮ್ಮಲ್ಲಿ 'ವಿಶ್ವಕುಟುಂಬಿ' ಎಂದು ಕರೆಯುತ್ತಾರೆ. ಈಹೊತ್ತು ನಮ್ಮಲ್ಲಿ 'One World' ಎಂದು ಏನು ಕೂಗು ಕೇಳಿಸುತ್ತಿದೆಯೋ ಇದನ್ನೇ ನಮ್ಮ ಪ್ರಾಚೀನರು 'ವಸುಧೆಯೇ ಕುಟುಂಬ' ಎಂದು ಅಂದೇ ಹೇಳಿದರು. ಈ ಭಾವನೆಯಿಂದ ಬದುಕುವವರನ್ನು 'ಉದಾರವಾದ ಚರಿತೆಯುಳ್ಳವರು'

ಎಂದು ವರ್ಣಿಸಿದರು. ಈ ವರ್ಣನೆಗೆ ಗಾಂಧಿಜಿ ಸಜೀವವಾದ ಉದಾಹರಣೆ ಯಾಗಿದ್ದರು.

ಹೀಗೆ, ಈಗಿನ ಕಾಲದ ಎಲ್ಲಾ ರಾಷ್ಟ್ರಗಳಿಗೂ ಆ ರಾಷ್ಟ್ರಗಳ ವಿಚಾರ ಬುದ್ಧಿಗಳಿಗೂ ಗಾಂಧಿಯವರು ಅಷ್ಟೋ ಇಷ್ಟೋ ಅಂತೂ ಬೇಕಾದವ ರಾಗಿದ್ದರು ಎಂಬುದರ ಜೊತೆಯಲ್ಲಿಯೇ ನಾವು ಗಮನಿಸಬೇಕಾದುದು ಇನ್ನೂ ಒಂದು ಅಂಶವುಂಟು. ಗಾಂಧಿಯವರು ಇದ್ದಾಗಲೂ ಅವರು ಹೋದ ಮೇಲೂ ಜನ ತಮ್ಮ ತಮ್ಮ ರುಚಿಗೆ ಹೊಳೆದಂತೆ ಗಾಂಧಿಯವರನ್ನು ರಾಮ, ಕೃಷ್ಣ, ಬುದ್ಧ, ಯೇಸು, ಭಗೀರಥ, ಅರ್ಜುನ, ಹನುಮಂತ, ಅಶೋಕ ಮುಂತಾದ ಹಲವರ ಹಲವಾರು ಗುಣಗಳಿಗೆ ಹೋಲಿಸಿದರು. ಈಗ ನಾನು ಹೇಳಿದ ಹೆಸರುಗಳೆಲ್ಲಾ ನಿಜವಾಗಿಯೂ National ಎನ್ನಿಸಿಕೊಂಡ ವ್ಯಕ್ತಿಗಳು. ಇವರ ನಡುವೆಯೆಲ್ಲಾ ಓಡಿಯಾಡಿ, ಇವರ ಗುಣಗಳ ಒಂದೊಂದು ಅಂಶ ಗಳನ್ನು ತಮಗೆ ಒಳಗಿಸಿಕೊಂಡು ಬದುಕಿಹೋದ ಗಾಂಧಿಯವರನ್ನು ಈ ಅರ್ಥದಲ್ಲಿ International ಎಂದು ಕರೆದರೆ, ಅದು ತಪ್ಪಾಗದು.

ಈ ದೃಷ್ಟಿಯಿಂದ ಗಣನೆಮಾಡಿದರೆ, ಗಾಂಧಿಯವರು ಸರ್ವದೇಶಕ್ಕೆ ಸೇರಿದವರು ಮಾತ್ರವಲ್ಲ, ಸರ್ವಕಾಲಕ್ಕೂ ಸೇರುವ ಸಾರವನ್ನು ವೃದ್ಧಿಪಡಿಸಿ ಕೊಂಡವರು ಎಂದೆನಿಸುವುದು. ಗೀತೆಯ ಭಾಷೆಯಲ್ಲಿ ಹೇಳುವುದಾದರೆ, ಗೀತೆಯ ಮಡಿಲಲ್ಲಿ ಬೆಳೆದ ಗಾಂಧಿಯವರನ್ನು 'ಸರ್ವ' ಎಂದು ಕರೆಯುವುದೇ ಒಪ್ಪ.

ಗೀತೆಯಲ್ಲಿ ಅರ್ಜುನ ಕೃಷ್ಣನನ್ನು ಸ್ತೋತ್ರಮಾಡುತ್ತಾನೆ:

"ಅನಂತವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ"

"ನೀನು ಅನಂತವೀರ್ಯ, ಅಮಿತವಿಕ್ರಮ, ನೀನು ಎಲ್ಲದರಲ್ಲೂ ವ್ಯಾಪಿಸಿದ್ದೀಯೆ. ಆದ್ದರಿಂದ ನೀನು ಸರ್ವ"—ಎಂಬ ಈ ವರ್ಣನೆಗೆ ಸಾಂಪ್ರತಲೋಕದಲ್ಲಿ ಗಾಂಧಿಯವರಷ್ಟು ಪಾತ್ರರಾದವರು ಬೇರೆ ಯಾರೋ, ನಾ ಕಾಣೆ. ಮೊದ ಮೊದಲು International ಎಂಬ ಪದ ಹೀಗೆ ಸರ್ವವ್ಯಾಪಿ ಎಂಬ ಸದರ್ಥ ದಿಂದಲೇ ಮೊದಲಾಯಿತು. ಈ ಅರ್ಥದಲ್ಲಿ ಗಾಂಧಿಜಿ International figure ಹೌದು.

# GANDHIJI
## and
# THE FUTURE OF CIVILIZATION

DR. T. A. PURUSHOTTAM

The chief lesson, which a study of the past offers us, is overwhelming evidence, that we are living in one of the major periods of transformation in human history. While in a general way, our age resembles previous great eras of social and cultural transition (such as the disintegration of classical European culture around 300 to 600 A.D., and the supplanting of the medieval civilization by early modern culture, between 1500 and 1800) there are at least two important contrasts between those and ours. FIRSTLY, there is no parallel in history for the rapidity and tempo of change characteristic of our age. Our world has shrunk in the time dimension, as well as in the space dimension; and the future with us collapses into the present even before we have had the charity to figure out its details or make anticipatory adjustments. This rapidity is the first of the contrasts between ours and any earlier epoch of transition.

The second great contrast is the sharpness of definition, and the magnitude of the alternatives that face us. Mankind has never before been faced with a direct and immediate choice, between a deliberate inaguration of Utopia, and dark catastrophe. But such are precisely the alternatives which are offered to western civilization which indeed in our day is global and no longer merely Western Civilization.

If we overhaul our economic system, put the modern unparalleled machanical equipment at the service of mankind and wipe out the menace of war, we can *within a decade* step into a condition that would make the most visionary of Utopias seem drab and uninviting. That is one side of the picture. If men do not rise to their responsibilities and make the most of the already existing unprecedented mechanical equipment then the whole economic machine with its socio cultural complex—extremely delicately articulated as it is—faces a breakdown,

within a few years there is this prospect of collapse, not merely through internal weakness and contradictions of modern civilization, but also through the ever-present danger of people engaging devastating warfare, plunging the whole world into a new barbarism. If men continue on the road of evasion of the new responsibility to usher in Utopia at once, the best the world can hope for is insecurity, lower standards of living, greater unemployment, unrelieved want, misery and mass starvation. To these are to be added, the eclipse of culture, brutalization and emotions and the wholesale destruction of physical equipment and civilised amenities through mass violence.

In facing as we do, either Utopia or barbarism, our age stands without precedent in the history mankind. Western civilzation has yielded us a machine age uniquely prepared to serve mankind or to wreck it. Upon the type of control we can put on this empire of machines will depend the outcome. In a world of rapid change, either we shall move into a state of culture far ahead of anything hitherto realised by man or we shall within a generation revert to condition unmatched for mass misery since the early middle ages.

Look at the contraditions of our age. We have now an unprecedented power of production, side by side with equally unprecedented shortages we have the means to lift human drudgery and transfer it to the automatism of machines. And yet we have less space labour than ever before that could be engaged to human service. We have persistent alterations between famines of man power and widespread unemployment together, with the flight of soul corroding idleness. Through the opening up of transworld communication and development of techniques for mutual understanding, our world has risen to an unprecedented degree of humanitarian feeling. But, at the same time, we have sunk to perhaps, unheard of depths of barbarity in forms of class-warfare, nationalisms, racialisms of all sorts. The passions let loose by these sentiments find vent to-day in cold-blooded, scientifically planned cruelties dealt out with instruments of exquisite precision and contrivances of diabolical ingenuity. These contradictions and paradoxes are to be witnessed to-day side by side not merely in the same world, but often in the same country (our India not excepted) and is found in many places struggling for supremacy *within the same breast.*

These contradictions and paradoxes in the life of the World to-day would appear to indicate the existence of a serious malady, the tragic gap between our technological mastery over a material environment and the non-material factors in our effective culture. Never before has there been such a gulf between technoloy and the institutions of moral control, without which human beings cannot relate themselves in the forms of society and spirituality. Not only does this vast gulf exist between material culture on the one hand, and our social thinking and institutions on the other, we seem to be doing everything possible to widen the abyss. We provide almost every imaginable incentive, to extend our already top-heavy material equipment, and administrative control of human lives, conceived in terms of the Great Machine. Regimentation is the order of the day. Remote control (even of the happiness and freedom of distant peoples) is the fashion of the scientific mind. Freedom from want, Freedom from Fear, Freedom of Speech and Freedom of employ leisure will have to depend upon organizational skill, and *irresistable authority*: i.e., upon the machinery of a world Government or an International Secretariat. Says Prof. Barnes in a recent remarkable work:

> 'If our economic thinking and institutions were on the same level of efficiency and modernity as our machanical equipment, we could be living in a veritable Utopia where man would have to exert unbelievably little physical effort.'

So, that is the Utopia the XX century would build:–a World run by experts, on a plane of modernity and efficiency of the same level of perfection, as the modern machine. The civilization of the XX century promises to relieve us of physical effort. All will be well, say the Prophets, in this new Utopia of ours, with its remote controls, expert supervisions and administrative set up, on an international scale, able and willing to secure the four freedoms for men and women everywhere. From chaos we will move to control. Such is the faith. From penury to plenty. From the colossal wreckage and destruction of machines and the frustrations of civilization, through periodic and recurrent wars, into a world of material prosperity and universal relaxation.

Here then is the programme of action that the XX century contemplates to usher in Utopia, and stave off catastrophe.

It is a programme of action upon which there is singular unanimity on the part of the most forward of modern nations especially U.S.A., and U.S.S.R. The programme carries a validity unimpeachable in the logic of technological determinism. The four freedoms and all the resources of the Machine Age, in the service of man! What a fine prospect!

What say you, my listeners? Isn't this prospect too exciting to be resisted? What would our Bapuji have said to this? Whether you call it *Capitalism* or *Communism*, the logic of the formative influences, in an age of unprecedented technological triumphs, like ours, would push events in our world to the same consummation. Would Bapuji shy of these names and blind himself to realities? Where does the Mahatma stand? Is he realist or obscurantist? Has he lived and toiled all his life at cross purposes, with the insights of our Century? With his appeals to the Inner Voice, his prayers and penances, his threadbare attire and disclaimers against wanting to influence men (Ahimsa), is Bapuji a solitary survival of the mediaeval mind, harassed and confused amidst the clarities of our ultra Scientific, ultra Modern Age? Highly cultivated Minds and earnest seekers, by the thousands, all the world over (be they historians, sociologists, economists, statesmen, ecclesiasts, scientists, philosophers) are asking these questions. Those who disagree with him are more easily persuaded of their sanity and integrated intelligence, than those who publicly avow his leadership and privately sit tormented with doubts.

The question is not to be evaded. At any rate, not by those who cherish him in their hearts and are inspired by his advent. Who is the saner of the two? The builders of Modern Utopia or the Sage of Sabarmati?—There can be no mistake, that more than any one else, Mahatmaji understood the modern development. There can be no mistake, that his soul drew its sustenance out of a place lifted far above political anxieties and narrow nationalisms. There can be no mistake that he had an abundance of commonsense, courtesy and that sense of humour which protects one against blindness to one's own folly. With the fullest sense of responsibility and moral earnestness and with that strength that draws from a clear perception of truth, Mahatma Gandhi repudiated the Utopia of western civilsation. He would have none of it.

The basic categories of a civilisation, conceived in terms of the age of the machine, appealed to him as diametrically

opposed to those he contemplated as consistent with the dignity of man. In his message to the Asian Relations Conference which met in Delhi, about 18 months ago, he said:

> 'The message of the East, the message of Asia, is not to be learnt through European spectacles. Asia has to conquer the West through love. You and I are the inheritors of that message of love. You can redeliver this message with the greatest of emphasis. I am so sanguine, that, if all of you put, not merely your heads, but hearts together, understand the secret of the message, which all the wise men of the East, have left for us, and if we really become worthy of that great message, then you will easily understand that the conquest of the West will be completed and that conquest will be felt, by the West itself. The West today is pining for wisdom.'

These are grave words; but not the less generous for the reason they are grave. When President Roosevelt announced his four freedoms within the prospect of a regimented humanity, Gandhiji significantly called to Roosevelt, 'What about the fifth —the only Freedom that matters—*the Freedom to be Free* Gandhi or Humanity in Straight laces! Time and Eternity will reveal who will prevail; Utopia or Bapu?

> 'He that feeds men, serveth the few
> He serveth all, who dares to be true'
>
> Emerson.



# ಪ್ರವಾಸದಲ್ಲಿ

**ಕೆ. ಚೆಂಗಲರಾಯರೆಡ್ಡಿ**

ಈಗ ತಾನೇ ಮಹಾತ್ಮ ಗಾಂಧಿಯವರ ಭಾವಚಿತ್ರವನ್ನು ಸಂತೋಷದಿಂದ ಅನಾವರಣ ಮಾಡಿದ್ದೇನೆ. ಈ ಉತ್ಸವ ನಮ್ಮ ದೇಶವೇ ಏಕೆ—ಪ್ರಪಂಚದ ಎಲ್ಲ ಭಾಗಗಳಲ್ಲೂ ಈ ದಿನ ಆಚರಿಸಲ್ಪಡುತ್ತಿದೆ. ಎಲ್ಲ ವರ್ಗದ ಜನರೂ ಈ ಸಮಾರಂಭವನ್ನು ಆಚರಿಸುತ್ತಿದ್ದಾರೆ. ಈ ಸಮಾರಂಭದ ವಿಷಯವಾಗಿಯಾಗಲೀ, ಮಹಾತ್ಮಾಜಿಯವರ ತತ್ತ್ವಗಳ ವಿಷಯವಾಗಿಯಾಗಲೀ ಮಾತನಾಡುವುದು ಅನವಶ್ಯಕವೆಂದು ನಾನು ಭಾವಿಸುತ್ತೇನೆ. ಕಳೆದ ಹಲವು ದಿನಗಳಿಂದ ಪಂಡಿತ್ ನೆಹ್ರು, ಸರ್ದಾರ್ ಪಟೇಲ್, ಡಾಕ್ಟರ್ ರಾಜೇಂದ್ರ ಪ್ರಸಾದ್ ಮತ್ತು ಇತರ ಅನೇಕರು ಮಹಾತ್ಮ ಗಾಂಧಿಯವರ ತತ್ತ್ವಗಳ ಸಾರಾಂಶವನ್ನು ತಿಳಿಸುತ್ತಿದ್ದಾರೆ. ಅವರ ತತ್ತ್ವಗಳನ್ನು ನಾವು ಅರಿತು ಅದರಂತೆ ನಡೆಯಬೇಕು.

ನಾನು ಮಹಾತ್ಮ ಗಾಂಧಿಯವರನ್ನು ಮೊದಲು ೧೯೨೭ ನೇ ಇಸವಿಯಲ್ಲಿ ಭೇಟಿಮಾಡುವ ಸೌಭಾಗ್ಯ ಪಡೆದೆನು. ಅದಕ್ಕೂ ಮುಂಚೆ ಅವರ ಭಾಷಣಗಳನ್ನು ಹಲವಾರು ಸಾರಿ ಕೇಳುವ ಸುಯೋಗ ಲಭಿಸಿತ್ತು. ವಿಶ್ರಾಂತಿಗಾಗಿ ಗಾಂಧೀಜಿಯವರು ನಂದಿಬೆಟ್ಟದಲ್ಲಿ ಬಿಡಾರಮಾಡಿದ್ದಾಗ, ಅವರೊಡನೆ ಇರುವ ಅವಕಾಶ ನನಗೆ ದೊರಕಿತು. ಅವರ ಮಾರ್ಗದರ್ಶನ ಮತ್ತು ಬುದ್ಧಿವಾದ ಈಗಲೂ ನನ್ನ ಕಿವಿಗಳಲ್ಲಿ ಮೊರೆಯುತ್ತಿದೆ. ಅವರ ಪ್ರಗಲ್ಭ ಸೂಚನೆಯ ಮೇರೆ ನನ್ನ ಜೀವಿತದ ವಿಷಯವಾಗಿ ಆಗ ಒಂದು ನಿರ್ಧಾರಕ್ಕೆ ಬಂದೆನು. ವಕೀಲ ವೃತ್ತಿಯನ್ನು ಬಿಟ್ಟು ಸಾರ್ವಜನಿಕ ಸೇವೆಗೆ ನನ್ನನ್ನು ಅರ್ಪಣೆ ಮಾಡಿಕೊಳ್ಳಲು ನಿರ್ಧರಿಸಿದೆನು. ಅಂದಿನಿಂದಲೂ ಯಥಾಶಕ್ತಿ ಅದೇ ಮಾರ್ಗದಲ್ಲಿ ಮುನ್ನಡೆಯುತ್ತಿದ್ದೇನೆ. ಮತ್ತೆ ನಾನು ಗಾಂಧೀಜಿಯವರನ್ನು ಭೇಟಿಮಾಡಿದುದು ೧೯೩೬ ರಲ್ಲಿ. ಆಗ ನಾನು ಕೋಲಾರ ಜಿಲ್ಲಾ ಬೋರ್ಡಿನ ಅಧ್ಯಕ್ಷನಾಗಿದ್ದೆ. ಗಾಂಧೀಜಿ ನಂದಿಬೆಟ್ಟದಲ್ಲಿ ಸುಮಾರು ಒಂದೂವರೆ ತಿಂಗಳ ಕಾಲ ಇದ್ದರು. ಕೋಲಾರ ಜಿಲ್ಲೆಯಲ್ಲಿ ಮಹಾತ್ಮರ ಪ್ರವಾಸವನ್ನು ಏರ್ಪಡಿಸುವಂತೆ

ನಾನು ಅವರ ಆಪ್ತಕಾರ್ಯದರ್ಶಿ ಶ್ರೀ ಮಹದೇವ ದೇಸಾಯಿ ಅವರನ್ನು ಪ್ರಾರ್ಥಿಸಿದೆ. ಹರಿಜನನಿಧಿಗೆ ಎಷ್ಟು ನಿಧಿ ಸಂಗ್ರಹಮಾಡುವೆವೆಂದು ಗಾಂಧೀಜಿ ನನ್ನನ್ನು ಕೇಳಿದರು. ಕೇವಲ ೨-೩ ದಿನಗಳ ಅವಕಾಶ ಮಾತ್ರ ಇದ್ದುದರಿಂದ ಒಂದು ಸಾವಿರ ರೂಪಾಯಿ ಸಂಗ್ರಹಿಸುವುದಾಗಿ ಹೇಳಿದೆ. ಗಾಂಧೀಜಿ ಅಷ್ಟು ಕಡಿಮೆ ಸೂಚಿಸಲು ನಾಚಿಕೆಯಾಗಿದೇ ಎಂದು ಆಕ್ಷೇಪಿಸಿದರು. ಅನಂತರ ಪ್ರವಾಸ ಕೈಗೊಳ್ಳಲು ಒಪ್ಪಿಕೊಂಡರು. ಸುಮಾರು ೧೫೦ ಮೈಲಿ ಯಷ್ಟು ದೂರ ಗಾಂಧೀಜಿ ಸಂಚರಿಸಿದರು. ಅವರ ಭಾಷಣಗಳು, ನಿಧಿಸಂಗ್ರ ಹಣೆ, ಒಟ್ಟಿನಲ್ಲಿ ಪ್ರವಾಸ ಕಾರ್ಯಕ್ರಮದ ಏರ್ಪಾಡು ಸಮರ್ಪಕವಾಗಿ ನಡೆಯಿತು. ಕೊನೆಯಲ್ಲಿ ಗಾಂಧೀಜಿ ಹೋಗುವಾಗ "ನಾವು ನಿಮಗೆ ಬಹಳ ತೊಂದರೆಕೊಟ್ಟೆವೆಂದು" ಹೇಳಿ ಅವರ ಕ್ಷಮೆ ಬೇಡಿದೆನು. ಕೂಡಲೇ ಗಾಂಧೀಜಿ ಹೇಳಿದರು "ಇತರರಿಗೆ ತೊಂದರೆ ಕೊಡುವವರು ತಾವೂ ಸಹ ತೊಂದರೆ ಪಡಲೇಬೇಕಾಗುವುದು" ಎಂದು. ಈ ಮಾತಿನಲ್ಲಿ ಬಹಳ ಅರ್ಥ ವಿದೆ, ಆದರೆ ಇದರ ವಿಷಯವಾಗಿ ಹೆಚ್ಚು ಹೇಳದೆ ನಿಮ್ಮ ಆಲೋಚನೆಗೆ ಒಪ್ಪಿಸುತ್ತೇನೆ.

ಗಾಂಧೀಜಿಯವರನ್ನು ಭೇಟಿಮಾಡುವ ಸದವಕಾಶ ನನಗೆ ಹಲವು ಬಾರಿ ದೊರಕಿತು. ಪ್ರತಿಯೊಂದು ಬಾರಿಯೂ ಅವರು ನನಗೆ ಒಳ್ಳೆಯ ಸಲಹೆಯಿತ್ತು ಬುದ್ಧಿ ಹೇಳುತ್ತಿದ್ದರು. ೧೯೪೦ ನೇ ಇಸವಿಯಲ್ಲಿ ಸರ್ ಮಿರ್ಜಾ ಇಸ್ಮೇಲ್ ರವರು ಮೈಸೂರಿನ ದಿವಾನರಾಗಿದ್ದಾಗ, ಇಲ್ಲಿನ ಪರಿಸ್ಥಿತಿಯನ್ನು ಗಾಂಧೀಜಿ ಯವರಿಗೆ ತಿಳಿಸಲು ಕಾಂಗ್ರೆಸ್ಸಿನ ನನ್ನ ಸ್ನೇಹಿತರು ನನ್ನನ್ನು ಕಳುಹಿಸಿದರು. ಮಹಾತ್ಮರೊಡನೆ ನಾನು ಇದ್ದ ಎರಡು ತಿಂಗಳ ಅವಧಿಯಲ್ಲಿ, ಸರ್ ಮಿರ್ಜಾ ರವರು ಗಾಂಧೀಜಿಯವರಲ್ಲಿ ಉಂಟುಮಾಡಿದ್ದ ಅಭಿಪ್ರಾಯವನ್ನು ಬದಲಾಯಿ ಸಲು ಸಾಧ್ಯವಾಯಿತು. ಆ ದಿನಗಳ ನೆನೆಸವು ನನ್ನ ಮನಸ್ಸಿನಲ್ಲಿ ಇನ್ನೂ ಅಚ್ಚಳಿಯದೆ ನಿಂತಿದೆ. ಮಹಾತ್ಮಾಜಿಯವರು ಪ್ರೇಮ ವಿಶ್ವಾಸಗಳ ದಿವ್ಯ ಮೂರ್ತಿಯಾಗಿದ್ದರು. ಆಶ್ರಮದಲ್ಲಿದ್ದ ಪ್ರತಿಯೊಬ್ಬರ ವಿಷಯದಲ್ಲೂ ಅವರ ಆಸಕ್ತಿ, ಸಹಾನುಭೂತಿ ಮತ್ತು ಕರುಣೆ ಅಪಾರವಾಗಿದ್ದುವು. ನಾನು ಹೋದ ಮೊದಲ ದಿನಗಳಲ್ಲಿ ನಾನು ಮೈಸೂರಿನಿಂದ ಬಂದವನೆಂದು ತಿಳಿದು, ನನ್ನ ಅಭ್ಯಾಸಕ್ಕೆ ಅನುಸಾರವಾಗಿ ಬೆಳಿಗ್ಗೆ ಕಾಫಿ ತೆಗೆದುಕೊಳ್ಳುವಂತೆ ಅವರೇ ಸೂಚಿಸಿದರು. ಸಂಕೋಚಪಡದೆ ಕಸ್ತೂರಿಬಾ ಅವರನ್ನು ಕಾಫಿ ಕೇಳುವಂತೆ ಹೇಳಿದರು. ಅಲ್ಲದೆ ಬೆಚ್ಚನೆಯ ಬಟ್ಟೆಗಳನ್ನು ತೆಗೆದುಕೊಳ್ಳುವಂತೆ ಸಲಹೆ ಮಾಡಿ ದರು. ಎಲ್ಲರನ್ನೂ ಅವರು ತಾವೇ ವಿಚಾರಿಸಿಕೊಳ್ಳುತ್ತಿದ್ದರು. ಅನಾರೋಗ್ಯ

ದಲ್ಲಿದ್ದವರನ್ನಂತೂ ಹೆಚ್ಚು ಶ್ರದ್ಧೆಯಿಂದ ನೋಡಿಕೊಳ್ಳುತ್ತಿದ್ದರು. ಆಶ್ರಮ ದಿಂದ ಬೇರೆ ಕಡೆಗೆ ಹೋಗಿದ್ದಾಗ ಕೂಡ ಆಶ್ರಮದಲ್ಲಿದ್ದ ರೋಗಿಗಳ ವಿಷಯ ವಾಗಿ ಪ್ರತಿದಿನ ವರದಿ ಕಳುಹಿಸುವಂತೆ ಶ್ರೀ ಮಹದೇವ ದೇಸಾಯರಿಗೆ ಆಜ್ಞಾಪಿಸಿದ್ದರು. ನನ್ನ ಸಹೋದ್ಯೋಗಿಗಳಾದ ಶ್ರೀ ಹೆಚ್. ಸಿ. ದಾಸಪ್ಪ ನವರು ಗಾಂಧೀಜಿಯವರ ಆಶ್ರಮದಲ್ಲಿದ್ದು ಅವರ ಚಿಕಿತ್ಸೆ ಮತ್ತು ಶುಶ್ರೂಷೆಗೆ ಒಳಗಾಗಿದ್ದರು.

ಮಹಾತ್ಮರು ಬಹಳ ದೈವಭಕ್ತರು. ದೇವರಲ್ಲಿ ಅವರಿಗೆ ಅಚಲವಾದ ನಂಬಿಕೆ ಮತ್ತು ಭಕ್ತಿ ಇತ್ತು.

ದೀನದರಿದ್ರರ ವಿಷಯದಲ್ಲಿ ಗಾಂಧೀಜಿಗೆ ವಿಶೇಷವಾದ ಆಸಕ್ತಿ ಮತ್ತು ವಿಶ್ವಾಸವಿತ್ತು. ಬಡರೈತರನ್ನು ಸಂತೋಷಗೊಳಿಸಲು ತಾವೇ ಯತ್ನಿಸು ತ್ತಿದ್ದರು. ಒಂದುಸಾರಿ ಗಾಂಧೀಜಿ ಹೋಗುತ್ತಿದ್ದಾಗ್ಗೆ ರೈತನೊಬ್ಬ ಮುಂದೆ ಬಂದು "ಗಾಂಧೀಜೀಕಿ ಜೈ" ಎಂದ. ಮಹಾತ್ಮಾಜಿ ಕೂಡಲೇ "ಕಿಸಾನ್ ಕಿ ಜೈ" ಎಂದರು. ರೈತರ ಬಗ್ಗೆ ಅವರಿಗಿದ್ದ ಪ್ರೇಮಕ್ಕೆ ಇದೊಂದು ನಿದರ್ಶನ ಸಾಕು. ಗಾಂಧೀಜಿಯವರು ಆಶ್ರಮದಲ್ಲಿದ್ದ ರೋಗಿಗಳೊಡನೆಯಾಗಲಿ, ಬೀದಿಯಲ್ಲಿ ಬಡಜನರು ಮತ್ತು ಸಣ್ಣ ಮಕ್ಕಳೊಡನೆ ಇರುತ್ತಿದ್ದಾಗಲಾಗಲಿ, ನನಗೆ ಯೇಸುಕ್ರಿಸ್ತನ ನೆನಪು ಬರುತ್ತಿತ್ತು.

ಗಾಂಧೀಜಿಯವರ ತತ್ತ್ವೋಪದೇಶ ಎಲ್ಲರಿಗೂ ತಿಳಿದಿರುವುದರಿಂದ ಅದನ್ನು ಮತ್ತೆ ನಾನು ಹೇಳುವ ಅವಶ್ಯಕತೆಯಿಲ್ಲ. ಸತ್ಯ ಮತ್ತು ಅಹಿಂಸೆ ಇವೆರಡು ಮಹಾ ತತ್ತ್ವಗಳನ್ನು ನಾವು ಅರಿತು ಆಚರಣೆಗೆ ತರಬೇಕಾಗಿದೆ. ಆ ಮಾರ್ಗದಿಂದ ಮಾತ್ರ ದೇಶಕ್ಕೆ ಸರಿಯಾದ ಸೇವೆ ಸಲ್ಲಿಸಲು ಸಾಧ್ಯ ವಾದೀತು. ಗಾಂಧೀಜಿಯವರು ನಮಗೆ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟರು. ಆ ಸ್ವಾತಂತ್ರ್ಯವನ್ನು ಉಳಿಸಿಕೊಂಡು, ವಿಶ್ವಶಾಂತಿ ಸ್ಥಾಪಿಸಬೇಕಾದರೆ ಸತ್ಯ ಮತ್ತು ಅಹಿಂಸೆಯ ಮಾರ್ಗವೇ ಉಚಿತವಾದುದು.

ಮಹಾತ್ಮ ಗಾಂಧಿಯವರು ಜೀವಿಸಿದ್ದ ಕಾಲದಲ್ಲಿ ನಾವೂ ಬದುಕಿದ್ದೇ ವೆಂದು ಹೆಮ್ಮೆಪಡುತ್ತೇವೆ. ನಾವು ಗಾಂಧೀಜಿಯವರ ಮಕ್ಕಳೆಂದು ಹೆಮ್ಮೆ ಯಿಂದ ಹೇಳಿಕೊಳ್ಳುತ್ತೇವೆ. ಅವರ ಭಾವಚಿತ್ರ ನಮಗೆ ಯಾವಾಗಲೂ ಸ್ಫೂರ್ತಿಯನ್ನೀಯಲಿ. ಶಾಂತಿಮಾರ್ಗದಲ್ಲಿ ಜೀವಿಸಲು ನಮಗೆ ಅವರ ಆತ್ಮಜ್ಯೋತಿ ಮಾರ್ಗದರ್ಶಕವಾಗಲಿ. ಜೈ ಹಿಂದ್.

---

# ಸೇವಾಗ್ರಾಮ

ಹೆಚ್. ಸಿ. ದಾಸಪ್ಪ

ಗಾಂಧೀಜಿಯವರ ಜನ್ಮೋತ್ಸವದ ಸಮಾರಂಭದಲ್ಲಿ ನನ್ನ ಭಕ್ತಿ ಪುರಸ್ಸರವಾದ ಕಾಣಿಕೆಗಳನ್ನು ಅವರ ಅಡಿದಾವರೆಗಳಲ್ಲಿ ಅರ್ಪಿಸಲು ಅವಕಾಶ ದೊರಕಿದ್ದು ನನ್ನ ಪುಣ್ಯ. ಅವರ ಜೀವಿತಕಾಲದಲ್ಲೇ ನಾವು ಜೀವಿಸಿದುದೇ ಒಂದು ಭಾಗ್ಯ. ಅವರ ದರ್ಶನಲಾಭವನ್ನು ಪಡೆದವರದು ಮತ್ತಷ್ಟು ಪುಣ್ಯ. ಅವರ ಪರಿಚಯಸ್ಥರಾಗಿ ಅವರ ಆದರಾಶೀರ್ವಾದಗಳಿಗೆ ಪಾತ್ರರಾಗುವುದೆಂದರೆ ಅದು ಒಂದು ವಿಶೇಷ ಪುಣ್ಯ. ಸೇವಾಗ್ರಾಮಕ್ಕೆ ಎರಡು ಸಲ ಎರಡು ತಿಂಗಳ ಪಟ್ಟಿಗೆ ಹೋಗಿ ನೆಲಸುವ ಅಪೂರ್ವ ಭಾಗ್ಯ ನನಗೆ ದೊರಕಿತು. ಸೇವಾಗ್ರಾಮದ ಜೀವನದ ವಿಚಾರ ಮಾತನಾಡಬೇಕೆಂದು ನನ್ನನ್ನು ಅಪೇಕ್ಷಿಸಿದ್ದಾರೆ. ಪೂಜ್ಯ ಮಹಾತ್ಮಾಜಿಯವರ ತತ್ತ್ವಗಳು, ಯೋಜನೆಗಳು ಇವುಗಳ ವಿಚಾರ ಅವರ ಬರವಣಿಗೆಗಳ ಮೂಲಕವೇ ಸಾಕಾದಷ್ಟು ತಿಳಿದುಕೊಳ್ಳಬಹುದು. ಆದರೀಗ ನನ್ನ ಕರ್ತವ್ಯ ಅವರ ನಿತ್ಯಜೀವನದ ವಿಚಾರ ನಾಲ್ಕು ಮಾತುಗಳನ್ನು ಆಡತಕ್ಕದ್ದು.

ಈ ವಿಷಯವನ್ನು ಪ್ರಸ್ತಾಪಿಸುವ ಮೊದಲು ನಾನೇ ಅವರ ಆಶ್ರಮಕ್ಕೆ ಹೋಗಲು ಕಾರಣವೇನೆಂಬುದನ್ನು ತಿಳಿಸುವುದು ಅಗತ್ಯ. ಅದರಿಂದಲೇ ಹೇಗೆ ಪ್ರಪಂಚದ ಎಲ್ಲ ಜನತೆಯ ಬಲವನ್ನು ಅವರು ಸಂಪಾದಿಸಲಾಯಿತೆಂಬುದು ತಿಳಿಯಬರುತ್ತೆ. ಪ್ರೇಮವನ್ನು ಸಂಪಾದಿಸಬೇಕಾದರೆ ಪ್ರೇಮದ ಮೂಲಕವೇ ಎಂದು ನಾಣ್ಣುಡಿ ಇದೆ. ಎಲ್ಲರನ್ನೂ ಮಕ್ಕಳಂತೆ ಕಾಣುತಿದ್ದುದರಿಂದ ಎಲ್ಲರಿಗೂ ಅವರು ತಂದೆಯಾದರು.

೧೯೩೯ ನೇ ಸಾಲಿನಲ್ಲಿ ನಾನು ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷನಾಗಿದ್ದಾಗ ಜವಾಬ್ದಾರಿ ಸರಕಾರಕ್ಕಾಗಿ ನಡೆಸಿದ ಸತ್ಯಾಗ್ರಹ ಸಮರದಲ್ಲಿ ಅನೇಕರು ಕಾರಾಗೃಹವನ್ನು ಸೇರಿದರು. ಆ ಸಮಯದಲ್ಲಿ ಅಂಥ ಅಧಿಕಾರಿಗಳ ದಬ್ಬಾಳಿಕೆ ಬಹಳವಾಗಿತ್ತು. ಸತ್ಯಾಗ್ರಹಿಗಳ ಮೇಲೆ ಪೋಲೀಸರು ಅನೇಕ ಅತ್ಯಾಚಾರಗಳನ್ನು ನಡೆಸಿದ್ದರು. ದಿವಾನ್ ಸರ್ ಮಿರ್ಜಾರವರು (ಅತ್ಯಾ



ಬಾಪೂಜಿ ಸೇವಾಗ್ರಾಮದ ಕುಟೀರ. "ನನ್ನ ದೇಶದ ಬಹುಸಂಖ್ಯಾತರೆಲ್ಲ ದಟ್ಟ ದರಿದ್ರರು. ಅವರಂತೆ ಬಾಳಿ ಅವರ ಕಷ್ಟಗಳನ್ನರಿಯಬೇಕು" ಎಂದರು ಬಾಪೂ. ಅಂತೆಯೇ ಸೇವಾಗ್ರಾಮದ ಅವರ ಕುಟೀರ ದರಿದ್ರನಾರಾಯಣ ಮಂದಿರವಾಗಿತ್ತು. ವಿಶ್ವದ ಎಲ್ಲ ಮೂಲೆಗಳಿಂದಲೂ ವಿಖ್ಯಾತರೂ, ಇಡೀ ರಾಷ್ಟ್ರಗಳ ಅಧಿಕಾರ ಸೂತ್ರಗಳನ್ನೇ ಹಿಡಿದಾಡಿಸುವವರೂ ಈ ಕುಟೀರಕ್ಕೆ ಭೇಟಿಕೊಟ್ಟು ಬಾಪೂ ದರ್ಶನಲಾಭ, ಸ್ನೇಹಲಾಭ ಪಡೆಯುತ್ತಿದ್ದರು.

ಚಾರಗಳ ಆರೋಪಣೆ ಸರಿಯಲ್ಲವೆಂದು ವಾದಿಸಿ) ಗಾಂಧೀಜಿಯವರಿಗೆ ಪತ್ರ ಬರೆದು ಬೇಕಾದರೆ ತಮ್ಮ ಆಪ್ತ ಕಾರ್ಯದರ್ಶಿಯವರಾದ ಶ್ರೀ ಮಹದೇವ ದೇಸಾಯಿಯವರನ್ನು ಕಳುಹಿಸಿ ವಿಚಾರಿಸಬಹುದೆಂದು ಆಹ್ವಾನಿಸಿದರು. ಅವರು ಬಂದು ಸಂಸ್ಥಾನಾದ್ಯಂತವೂ ಸಂಚಾರಮಾಡಿ ಜೈಲುಗಳಿಗೆ ಭೇಟಿಕೊಟ್ಟು ಅನೇಕ ಸತ್ಯಾಗ್ರಹಿಗಳ ಸಾಕ್ಷ್ಯವನ್ನು ತೆಗೆದುಕೊಂಡು ವರದಿಯನ್ನೊಪ್ಪಿಸಿದರು. ಆಗಲೀಗ ಗಾಂಧೀಜಿಯವರಿಗೆ ಮೈಸೂರಿನವರು ಎಷ್ಟರ ಮಟ್ಟಿಗೆ ಅಹಿಂಸಾ ತತ್ವವನ್ನು ಪರಿಪಾಲಿಸುತ್ತಿದ್ದರೆಂದು ತಿಳಿಯಬಂತು. ಅದಾದ ಕೆಲದಿನಗಳಲ್ಲಿ, ಅಂದರೆ ೧೯೪೦ ರ ಜನವರಿಯಲ್ಲಿ, ಖಾಯಿಲೆ ಬಿದ್ದು ನನಗೆ ವ್ಯಾಧಿ ಕಠಿಣವಾಯಿತು. ಈ ವಿಚಾರ ಗಾಂಧೀಜಿಯವರಿಗೆ ತಿಳಿಯಬಂತು. ಕೂಡಲೇ ಶ್ರೀ ದೇಸಾಯಿಯವರ ಮೂಲ್ಕ ಅವರು ಪತ್ರ ಬರೆಸಿದರು. ನಿನ್ನ ಖಾಯಿಲೆ ಉಗ್ರವಾದದ್ದು—ಅದನ್ನು ಉದಾಸೀನದಿಂದ ಕಾಣಬಾರದು. ಸೇವಾಗ್ರಾಮಕ್ಕೆ ಬಂದರೆ ಎರಡು ತಿಂಗಳೊಳಗಾಗಿ ನಿನ್ನನ್ನು ಗುಣಪಡಿಸಿ ವಾಪಸು ಕಳುಹಿಸುತ್ತಾರೆ. ಏತಕ್ಕೆ ಒಡನೆಯೇ ಬರಬಾರದು ಎಂದು ಬರೆದರು. ಹೀಗೆ ಮೈಸೂರಿನ ಒಬ್ಬ ಸಾಧಾರಣ ವ್ಯಕ್ತಿಯ ವಿಚಾರದಲ್ಲಿ ಗಾಂಧೀಜಿಯವರು ಅಷ್ಟು ಆಸಕ್ತಿಯನ್ನು ತೋರಿಸಬೇಕಾದರೆ ಅವರ ಹೃದಯ ಎಷ್ಟು ವಿಶಾಲವಾಗಿತ್ತು, ಹೇಗೆ ನಾನಾ ಭಾಗಗಳ ಜನಾಂಗದವರ ಭಕ್ತಿ ಪ್ರೇಮಗಳನ್ನು ಸಂಪಾದಿಸುತ್ತಿದ್ದರೆಂಬುದು ಅರ್ಥವಾಗುತ್ತೆ.

ಆಗ ನಾನು ಹೋಗಲಿಕ್ಕೆ ಸಾಧ್ಯವಾಗದೇ ಹೋದರೂ ಕೆಲವು ತಿಂಗಳಾದ ನಂತರ ಹೋದೆ. ಶ್ರೀ ದೇಸಾಯಿಯವರ ಬಿಡಾರದಲ್ಲೇ ಇರಲು ಅಪ್ಪಣೆಯಾಯ್ತು.

ಗಾಂಧೀಜಿಯವರು ರಾಜಕೀಯವೇತ್ತರು, ನಿಜ. ಸಮಾಜ ಸುಧಾರಕರೂ ನಿಜ. ಅವರ ಆರ್ಥಿಕ ಯೋಜನೆಗಳು ಶ್ಲಾಘನೀಯವಾದವುಗಳು. ಸರ್ವ ಧರ್ಮ ಸಮನ್ವಯ ಮಾರ್ಗಗಳು. ಇವೆಲ್ಲರ ಜೊತೆಗೆ ಅವರು ವೈದ್ಯರೂ ಆಗಿದ್ದರು. ಪ್ರಕೃತಿ ಚಿಕಿತ್ಸೆ ನಡೆಸುತ್ತಿದ್ದರು.

ನನ್ನ ತೂಕ ಕಡಿಮೆಯಾಗದ ಹೊರತು ನನ್ನ ಆರೋಗ್ಯ ಗುಣಹೊಂದುವದಿಲ್ಲವೆಂದು ಚಿಕಿತ್ಸೆ ಪ್ರಾರಂಭಮಾಡಿದರು. ಮೂರು ತಿಂಗಳುಗಳಲ್ಲಿ ೧೫೦ ರಿಂದ ೧೧೪½ ಪೌಂಡಿಗೆ ಇಳಿದೆ—ಉಪವಾಸವೇ ಔಷಧಿ. ನನ್ನ ವ್ಯಾಧಿ ಮಾಯವಾಯ್ತು. ಗಾಂಧೀಜಿಯವರಿಗೇ ಆಶ್ಚರ್ಯ. ಅವರು ಒಬ್ಬ ಡಾಕ್ಟರ್ ಕೈಕೆಳಗೆ ಕೊಟ್ಟರು. ಅವರು ನನ್ನನ್ನು ಘೋರತರವಾದ ಉಪವಾಸಕ್ಕೆ ಗುರಿಮಾಡಿ ನನಗೆ ಸ್ವಲ್ಪ ಕಷ್ಟವಾಯಿತು. ಇದು ನನ್ನ ಮೊದಲನೇ ಆಶ್ರಮ ಜೀವನ.

ಎರಡನೇಸಲದ ಭೇಟಿಗೆ ಕಾರಣ ಇಷ್ಟೆ. ೧೯೪೪ ನೇ ಸಾಲಿನಲ್ಲಿ ಅವರು ಕಾರಾಗೃಹದಿಂದ ಬಿಡುಗಡೆಯಾದ ಬಳಿಕ ಪಂಚಗಣಿಯಲ್ಲಿ ಆರೋಗ್ಯಕ್ಕಾಗಿ ವಿರಾಮ ಹೊಂದುತ್ತಲಿದ್ದರು. ನಾನು ಅವರ ಭೇಟಿಗಾಗಿ ಹೋದೆ. ಶ್ರೀ ರಾಜಾಜಿಯವರೊಬ್ಬರು ಹತ್ತಿರವಿದ್ದರು. ನಮಸ್ಕಾರ ಮಾಡಿದೊಡನೆ ರಾಜಾಜಿಯವರ ಕಡೆ ತಿರುಗಿ 'ದಾಸಪ್ಪ ತನ್ನ ಮಾತನ್ನು ಇನ್ನೂ ನಡಿಸಿ ಕೊಟ್ಟಿಲ್ಲ—ನನ್ನ ಫೀಸು ಕೊಟ್ಟಿಲ್ಲ. ಪಾಗ್ಗಾನವನ್ನು ಮರೆತಂತಿದೆ' ಎಂದರು. ನನಗೆ ಆಶ್ಚರ್ಯವಾಯಿತು. 'ಏನೂ ಗೊತ್ತಿಲ್ಲವಲ್ಲ, ದಯವಿಟ್ಟು ತಿಳಿಸಿ' ಎಂದೆ. ಅದಕ್ಕವರು 'ನಿನ್ನ ಕಾಯಿಲೆಯನ್ನು ಗುಣಪಡಿಸಿದರೆ ನನ್ನ ಫೀಸು ಕೊಡಬೇಕು. ನಿನ್ನ ಹೆಂಡತಿ ಮಕ್ಕಳನ್ನು ಆಶ್ರಮಕ್ಕೆ ಕರೆದುಕೊಂಡು ಬರುವುದೇ ಫೀಸೆಂದು ತಿಳಿಸಿದ್ದೆ. ಮರೆತಿರುತ್ತಿ' ಎಂದು ಜ್ಞಾಪಿಸಿದರು. ಎಂತಹ ಪ್ರೇಮ! ಅದಾದ ಬಳಿಕವೇ ನಾವೆಲ್ಲರೂ ೧೯೪೪ ಅಕ್ಟೋಬರ್‌ನಲ್ಲಿ ಅಲ್ಲಿಗೆ ಹೋಗಿ ೬ ತಿಂಗಳುಗಳ ಕಾಲ ಅವರ ಸೇವೆಯಲ್ಲಿದ್ದುದು. ಇದೇ ರೀತಿ ಭಾರತ, ಅಷ್ಟೇಕೆ ಪ್ರಪಂಚದ ನಾನಾ ಜನಗಳನ್ನು, ಅವರು ತಮ್ಮ ಪ್ರೇಮಬಂಧನದಿಂದ ವಶಮಾಡಿಕೊಂಡಿದ್ದರು.

ಆಶ್ರಮದ ನಿತ್ಯಜೀವನದ ವಿಚಾರ ಕೆಲಮಾತುಗಳನ್ನಾಡಬೇಕಾಗಿದೆ. ಛಳಿಗಾಲವಾಗಲೀ ಬೇಸಿಗೆಯಾಗಲೀ ಬೆಳಿಗ್ಗೆ ನಾಲ್ಕು ಗಂಟೆಗೆ ಸರಿಯಾಗಿ ಗಂಟೆ ಹೊಡೆದ ತಕ್ಷಣ ಆಶ್ರಮದವರೇಳಬೇಕು. ೪.೨೦ ರಿಂದ ೫ ಗಂಟೆ ವರೆವಿಗೆ ಪ್ರತಿನಿತ್ಯವೂ ತಪ್ಪದೆ ಪ್ರಾರ್ಥನೆ. ಗಾಂಧೀಜಿಯವರ ಕಾರ್ಯಕ್ರಮದಲ್ಲಿ ಪ್ರಾರ್ಥನೆಗೆ ಬಹು ಪ್ರಧಾನಸ್ಥಾನ. ಪ್ರಾತಃಕಾಲದ ಭಜನೆಯಲ್ಲಿ ಗೀತಾಧ್ಯಯನ ಇದ್ದೇ ಇರುತ್ತಿತ್ತು. ವಾರಕ್ಕೊಮ್ಮೆ ಗೀತೆಯ ೧೮ ಅಧ್ಯಾಯಗಳನ್ನೂ ಓದಿಸುತ್ತಿದ್ದರು. ಅನಾಸಕ್ತಿಯೋಗವೆಂದು ಕರೆದು ಗಾಂಧೀಜಿಯವರೇ ಗೀತೆಯ ವ್ಯಾಖ್ಯಾನ ಬರೆದಿದ್ದರೂ ಪ್ರತಿ ಬೆಳಿಗ್ಗೆಯೂ ಗೀತಾಧ್ಯಯನವನ್ನು ಮಾಡದೆ ಇರುತ್ತಿರಲಿಲ್ಲ. ಹಾಗೆಯೇ ರಾಮನಾಮ. ಅದಾದ ಬಳಿಕ ೫ ಗಂಟೆಯಿಂದ ಅವರವರು ತಮ್ಮ ಕೆಲಸದಲ್ಲಿ ನಿರತರಾಗುತ್ತಿದ್ದರು. ಅಲ್ಲಿ ಫ್ಲೋರ್ ಮಿಲ್‌ಗಳು ಇಲ್ಲ. ಆದ್ದರಿಂದ ಆಶ್ರಮಕ್ಕೆ ಬೇಕಾಗುವ ಗೋಧಿಯನ್ನೆಲ್ಲಾ ನಾವೇ ಬೀಸಬೇಕು. ಉದ್ಯೋಗವೇ ಪುರುಷಲಕ್ಷಣವೆಂಬುದು ಅಲ್ಲಿ ಕಾರ್ಯಾಚರಣೆಯಲ್ಲಿತ್ತು.

ಈ ಆಶ್ರಮ ಕೆಲಸಗಳಲ್ಲಿ ಎಲ್ಲರೂ ಭಾಗಿಯಾಗಬೇಕು. ದೊಡ್ಡವರೂ ಧನಿಕರೂ ಎಂದು ಭೇದವೇ ಇಲ್ಲ. ನನ್ನ ಆರೋಗ್ಯ ನೆಟ್ಟಗಾದ ಒಡನೆಯೇ ಕೆಲಸಗಳನ್ನು ಪ್ರಾರಂಭಮಾಡಿದೆ. ಗೋಧಿ ಬೀಸುವುದೊಂದು ಭಾಗ.

ಒಂದು ದಿನ ಬೀಸಲಿಕ್ಕೆ ಹೋದಾಗ ಪಂಜಾಬಿನ ದೊಡ್ಡ ಮನುಷ್ಯರೊಬ್ಬರು—ಧನಿಕರು ಮತ್ತು ಶಾಸನ ಸಭಾಸದಸ್ಯರು—ಇವರು ತಮ್ಮ ಡ್ರೈವರಿನೊಡನೆ ಕೂತು ಗೋಧಿ ಬೀಸುತ್ತಿದ್ದರು. ಪ್ರೊಫೆಸರ್ ಭನ್ಸಾಲಿಯವರೂ ಆಶ್ರಮವಾಸಿಗಳಾದ ಎಂ.ಎಸ್‌ಸಿ. ಪಾಸ್ ಮಾಡಿದವರೊಬ್ಬರೂ ಗೋಧಿ ಬೀಸುವುದರಲ್ಲಿ ನಿಪುಣರು. ಗಾಂಧೀಜಿಯವರು ಸಬರ್ಮತಿ ಆಶ್ರಮದಲ್ಲಿದ್ದಾಗ ಬಹಳ ಚೆನ್ನಾಗಿ ಬೀಸುತ್ತಿದ್ದರಂತೆ. ಇದಾದ ಮೇಲೆ ಫಲಹಾರ. ೬-೩೦ ಗಂಟೆ ಹೊಡೆಯುತ್ತಿತ್ತು. ಗಾಂಧೀಜಿಯವರು ಮೇಕೆಹಾಲು ಮತ್ತು ಹಣ್ಣು ಮಾತ್ರ ಸೇವಿಸುತ್ತಿದ್ದರು—ಸಾಧಾರಣವಾಗಿ ನಮಗೆ ಹಾಲು ಮತ್ತು ದಲಿಯಾ. ಎಲ್ಲರಿಗೂ ಹಾಲು ಸಾಕಾದಷ್ಟು ಒದಗಿಸಬೇಕೆಂದು ಅವರ ಅಭಿಲಾಷೆ. ೪ ಪೌಂಡು ಹಾಲು ಒಬ್ಬರಿಗೆ ಕೊಡುತ್ತಿದ್ದರು. ಅದಾದ ಕೂಡಲೇ ತರಕಾರಿ ಹೆಚ್ಚುವುದು ವಗೈರೆ ಕೆಲಸ ಒಂದು ಗಂಟೆಕಾಲ. ಆ ಒಳಿಕ ಸ್ವಾರಸ್ಯವಾದ ಮತ್ತೊಂದು ಕೆಲಸ. ಅದೇನೆಂದರೆ ಅಲ್ಲಿ ಹೊರಗಡೆಗೆ ಹೋಗಲಿಕ್ಕೆ ಬಕೆಟ್ಟುಗಳನ್ನು ಇಡುವ ಪದ್ಧತಿ ಆಚರಿಸುತ್ತಿದ್ದರು. ಅದನ್ನೆಲ್ಲಾ ಒಂದು ಕಡೆ ಚರಂಡಿಗೆ ಹಾಕಿ ಬಕೆಟ್ಟುಗಳನ್ನು ತೊಳೆದಿಡುವುದು. ಆ ಕೆಲಸವೇ ಒಂದು ಕಲೆಯಾಗಿರುತ್ತಿತ್ತು—ನಾವು ಕೆಲವರು ಅದರಲ್ಲಿ ಪ್ರವೀಣರಾಗಿದ್ದೆವು. ಅದರಿಂದ ಬಹು ಉತ್ತಮ ಗೊಬ್ಬರವಾಗುತ್ತೆ. ಆ ವಿಧಾನ ತಪ್ಪಿದರೆ ಚರಂಡಿ ಕಕ್ಕಸುಗಳನ್ನು ಸುಲಭ ರೀತಿಯಲ್ಲಿ ವ್ಯವಸ್ಥೆ ಮಾಡಬಹುದು—ಆರೋಗ್ಯ ನಿಯಮಗಳಿಗನುಸಾರವಾಗಿ ಸ್ವಚ್ಛವಾಗಿ ಇರುವಂತೆ ಮಾಡುವುದು ಸುಲಭ.

ಗಾಂಧೀಜಿಯವರು ಬೆಳಿಗ್ಗೆ ೭ ರಿಂದ ೯ ಗಂಟೆಯವರೆಗೆ ಗಾಳಿ ಸಂಚಾರಕ್ಕಾಗಿ ಹೊರಡುತ್ತಿದ್ದರು. ಅವರು ಹೊರಟರೆ ಅವರ ಹಿಂದೆ ಹೆಣ್ಣುಮಕ್ಕಳು ಸಣ್ಣಮಕ್ಕಳು ಎಲ್ಲರೂ ಹೊರಡುವರು. ಗಾಂಧೀಜಿಯವರ ಭೇಟಿಮಾಡಬೇಕೆಂದಿದ್ದರೆ ಆಗಲೇ ಆ ಕೆಲಸವೂ ಮುಗಿಯುತ್ತಿದ್ದಿತು. ಅದು ಮುಗಿದ ನಂತರ ಆಶ್ರಮದಲ್ಲಿ ಯಾರ್‍ಯಾರು ಕಾಯಿಲೆಯಾಗಿದ್ದಾರೋ ಅವರನ್ನೆಲ್ಲಾ ನೋಡಿಕೊಂಡು ಕೊನೆಯಲ್ಲಿ ಅಲ್ಲೇ ಪ್ರತ್ಯೇಕ ಗುಡಿಸಿಲಿನಲ್ಲಿದ್ದ ರೋಗಿಯೊಬ್ಬರ ಭೇಟಿಮಾಡುತ್ತಿದ್ದರು. ಅವರ ಹೆಸರು ಪರಚೂರಿ ಶಾಸ್ತ್ರಿಯೆಂದು. ಮರಾಟಿಯವರು, ಮಹಾಪಂಡಿತರು. ಅವರು ಇಲ್ಲಿ ಬಂದು ನೆಲಸಿದ್ದರು. ಒಂದುಸಲ ಶಾಸ್ತ್ರಿಯವರು ಜಿಗುಪ್ಸೆಯಿಂದ ಪ್ರಾಯೋಪವಾಸವನ್ನು ಕೈಗೊಂಡರು. ಆಗ ಗಾಂಧೀಜಿಯವರು ತಮ್ಮ ಕೈಯಿಂದಲೇ ದಿನವೂ ಅವರಿಗೆ ಮಾಲೀಸು ಮಾಡುತ್ತಿದ್ದರು. ಉಪವಾಸದಿಂದ ಅವರು ಗುಣ

ಹೊಂದಿ ಅವರ ವ್ರತವನ್ನು ನಿಲ್ಲಿಸಿದರು. ಬೆಳಿಗ್ಗೆ ಸಂಚಾರ ಮುಗಿದನಂತರ ಗಾಂಧೀಜಿಯವರು ಒಂದು ಗಂಟೆ ತಪ್ಪದೆ ಮಾಲೀಸು ಮಾಡಿಸಿಕೊಳ್ಳುತ್ತಿದ್ದರು. ಅವರ ಸ್ನಾನವಾದನಂತರ ಅವರ ಕೆಲಸ ಪ್ರಾರಂಭವಾಗುತ್ತಿತ್ತು. ೧೧ ಗಂಟೆಗೆ ಊಟ. ಊಟದ ವಿಧಾನವೂ ನಿರ್ಧರಿಸಿದ ಹಾಗೆ. ಅದಕ್ಕೂ ನಿಬಂಧನೆಗಳು. ಎಷ್ಟು ಬೇಕೋ ಅಷ್ಟು ಬಡಿಸಿಕೊಳ್ಳಬೇಕು. ನನಗೆ ಮೊದಲನೇ ಪಾಠ ಹೇಳಿದ್ದು ಚೆನ್ನಾಗಿ ಅಗಿಯಬೇಕೆಂದು. ನಿಧಾನವಾಗಿ ಊಟ ಮಾಡುತ್ತಿದ್ದರು. ಗಾಂಧೀಜಿಯವರ ಊಟ ಬಹಳ ಸರಳ. ಮೇಕೆ ಹಾಲು ಅವರು ಆಕಳ ಹಾಲನ್ನು ಅನೇಕ ವರ್ಷಗಳ ಹಿಂದೆಯೇ ತ್ಯಜಿಸಿದ್ದರು. ಟೊಮೆಟೋ ರಸ, ಹಸಿ ಮತ್ತು ಹವೆಯಲ್ಲಿ ಬೇಸಿದ ತರ್ಕಾರಿ, ಉಪ್ಪು ಸಹಿತ ತ್ಯಾಜ್ಯ, ಬೇವಿನಚಟ್ನಿ, ಇವೇ ಅವರ ಮುಖ್ಯ ಊಟ.

ಪ್ರಪಂಚದ ನಾನಾ ಭಾಗಗಳಿಂದ ಪತ್ರಗಳು ಬರುತ್ತಿದ್ದವು. ಮುಖ್ಯವಾದವುಗಳನ್ನೆಲ್ಲಾ ಅವರ ಗಮನಕ್ಕೆ ತರುತ್ತಿದ್ದರು. ಅವುಗಳಿಗೆಲ್ಲಾ ಉತ್ತರಗಳನ್ನು ಕೊಡುವುದು, ಪತ್ರಿಕೆಗಳಲ್ಲಿ ವಿಶೇಷ ವರ್ತಮಾನವನ್ನು ನೋಡುವುದು ಮತ್ತು ಭೇಟಿಮಾಡಲು ಬಂದವರಿಗೆ ಭೇಟಿಕೊಡುವುದು, ಇವುಗಳಲ್ಲಿ ನಿರತರಾಗುತ್ತಿದ್ದರು. ಅವರ ಬರವಣಿಗೆಯಲ್ಲಿ ಅವರ ಇತರ ಕಾರ್ಯಗಳಲ್ಲಿ ಇದ್ದ ಹಾಗೆಯೇ ವೈಶಿಷ್ಟ್ಯವಿತ್ತು. ನಾಲ್ಕೇ ಮಾತುಗಳಲ್ಲಿ ಪೂರ್ಣ ಅರ್ಥ ಬರುವ ಹಾಗೆ ಬರೆಯುತ್ತಿದ್ದರು. ಈ ಮಧ್ಯೆ 'ಹರಿಜನ' ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದರು. ಅವರ ಭೇಟಿಗಳು ಬಹಳ ಸ್ವಾರಸ್ಯವಾಗಿದ್ದವು. ಸಾಧಾರಣವಾಗಿ ಆ ಕಾಲದಲ್ಲಿ ಇತರರೂ ಅವರ ಒಂದು ಕೊಠಡಿಯ ಕುಟೀರದಲ್ಲಿರಬಹುದಾಗಿತ್ತು. ಗಾಂಧೀಜಿಯವರಲ್ಲಿ ಭಿನ್ನಾಭಿಪ್ರಾಯಗಳಿದ್ದು ಅವರಲ್ಲಿ ವಾದಿಸಲು ಬರುತ್ತಿದ್ದವರೆಲ್ಲ ಕೊಠಡಿಯಲ್ಲಿ ಬಂದ ತಕ್ಷಣವೇ ತಮ್ಮ ತರ್ಕಭಾವನೆಯನ್ನು ತೊರೆದು ನಮ್ರಶಿಷ್ಯರಂತೆ ವರ್ತಿಸುತ್ತಿದ್ದರು. ಸಾವಧಾನದಿಂದ ಕೇಳಿ ಕೆಲ ನಿಮಿಷಗಳಲ್ಲೇ ಎಲ್ಲ ವಿಷಯಗಳಿಗೂ ಉತ್ತರಕೊಡುತ್ತಿದ್ದರು. ಭಾರವಾದ ಜಟಿಲ ಪ್ರಶ್ನೆಗಳನ್ನು ಸುಲಭರೀತಿಯಲ್ಲಿ ಬಿಡಿಸುತ್ತಿದ್ದರು. ರಾಜಕೀಯ ಒಂದೇ ಅಲ್ಲ, ನಾನಾ ತರಹದ ಸಮಸ್ಯೆಗಳು ಅವರ ಮುಂದೆ ಬರುತ್ತಿದ್ದವು.

ನಾಲ್ಕು ಗಂಟೆಗೆ ಶ್ರೀ ದೇಸಾಯಿಯವರ ಕೊಠಡಿಯಲ್ಲಿ ಸಾಮೂಹಿಕವಾದ ಸೂತ್ರಯಜ್ಞ. ನೂಲು ತೆಗೆಯುವುದೊಂದೇ ಅಲ್ಲ—ಬೀಜವಿರುವ ಹತ್ತಿಯನ್ನು ಬಿಡಿಸಿ, ನಾವೇ ಬತ್ತಿಗಳನ್ನು ಮಾಡಿಕೊಂಡು ನೂಲು ತೆಗೆಯಬೇಕು. ಏನೇ ಕಾರ್ಯ ಗೌರವವಿರಲಿ ರಾಟೆ ತಿರುಗಿಸುವುದನ್ನು ಮಾತ್ರ ಬಿಡುತ್ತಿರಲಿಲ್ಲ.

ಐದುಗಂಟೆಗೆ ಸಂಜೆಯ ಊಟ. ಅದಾದ ಬಳಿಕ ಗಾಳಿಸಂಚಾರ. ಬೆಳಗಿನಂತೆಯೇ ಆ ಸಮಯದಲ್ಲಿ ಅವರೊಡನೆ ಅನೇಕರು ಮಾತನಾಡಲು ಅವಕಾಶವಿರುತ್ತೆ. ವಾಪಸು ಬಂದ ನಂತರ ಸಾಮೂಹಿಕ ಪ್ರಾರ್ಥನೆ. ಸಂಧ್ಯಾಪ್ರಾರ್ಥನೆಯಲ್ಲಿ ಗೀತೆ ಎರಡನೆಯ ಅಧ್ಯಾಯದಲ್ಲಿ ಸ್ಥಿತಪ್ರಜ್ಞನ ಸಂಬಂಧವಾದ ಶ್ಲೋಕಗಳನ್ನು ಪಠಿಸುವುದು ಮತ್ತು ತುಳಸೀರಾಮಾಯಣ ಪಾರಾಯಣ ಮಾಡುವುದು ತಪ್ಪದೆ ನಡೆಯುತ್ತಿದ್ದವು. ಪ್ರಾರ್ಥನೆಯಲ್ಲಿ ಗಾಂಧೀಜಿಯವರಿಗೆ ಗಾಢವಾದ ನಂಬಿಕೆ.

ಸರ್ವಧರ್ಮ ಸಮಾನತ್ವ ಎಂಬುದನ್ನು ಕಾರ್ಯಾಚರಣೆಯಲ್ಲಿ ತೋರಿಸುತ್ತಿದ್ದರು. ಜಪಾನೀಯರ ಒಂದು ಸೂತ್ರದಿಂದ ಪ್ರಾರಂಭವಾಗಿ ಸಂಸ್ಕೃತದಲ್ಲಿ ಸರ್ವ ಹಿಂದೂಗಳಿಗೂ ಅನ್ವಯಿಸುವ ಪ್ರಾರ್ಥನೆಗಳ ನಂತರ ಖೊರಾನ್ ಮತ್ತು ಪಾರ್ಸಿಯವರ 'ಜೆಂಡ ಅವೆಸ್ತಾ' ಗ್ರಂಥದಿಂದ ಕೆಲ ಶ್ಲೋಕಗಳ ಪಠನವಾಗುತ್ತಿತ್ತು.

ಗಾಂಧೀಜಿಯವರ ಆಶ್ರಮ ಶಿಷ್ಯಮಂಡಲಿಯಲ್ಲಿ ಭಾರತದ ನಾನಾ ಪ್ರಾಂತ್ಯದವರಿದ್ದರು. ಹಿಂದೂ ಮುಸಲ್ಮಾನ ಈಸಾಯಿಯವರೆಲ್ಲರೂ ಯಾವ ಭೇದಭಾವವಿಲ್ಲದೆ ಇದ್ದರು. ಬೆಳಿಗ್ಗೆ ಸಂಜೆ ಪ್ರಾರ್ಥನೆ ನಡೆಸುತ್ತಿದ್ದವರು ಶ್ರೀ ಪ್ರಭಾಕರ ಎಂಬುವ ಹರಿಜನ ಕ್ರಿಶ್ಚಿಯನ್. ಅಡಿಗೆಗೆ ಸಹಾಯ ಮಾಡುತ್ತಿದ್ದವರು ಹರಿಜನರು. ಯಾರಿಗೂ ಗೊತ್ತಾಗುತ್ತಿರಲಿಲ್ಲ.

ಅಲ್ಲಿಯ ಜೀವನ ಬಹಳ ಕಠಿಣವಾಗಿರುತ್ತಿತ್ತು. ಅನೇಕರು ಆಶ್ರಮಕ್ಕೆ ಬರಲು ಬಹಳ ತವಕಪಡುತ್ತಿದ್ದರು. ಪ್ರತಿನಿತ್ಯವೂ ಆಶ್ರಮದಲ್ಲಿ ಬಂದಿರಬೇಕೆಂದು ಪತ್ರ ಬರೆಯುತ್ತಿದ್ದರು. ಬಂದ ಬಳಿಕ ಕಷ್ಟದ ಕೆಲಸಮಾಡಿ ಅವರಾಗಿ ಬೇಗ ಬಿಟ್ಟುಹೋಗುತ್ತಿದ್ದರು.

ಗಾಂಧೀಜಿಯವರ ಜೀವನ ಕಠಿಣವಾಗಿದ್ದರೂ—ಇತರ ಅತಿಥಿಗಳ ವಿಚಾರದಲ್ಲಿ ಅವರು ಬಹಳ ರಿಯಾಯಿತಿಗಳನ್ನು ಒದಗಿಸುತ್ತಿದ್ದರು. ಕಾಫೀ ಕುಡಿಯುವವರು ಬಂದರೆ ಅವರಿಗೆ ಕಾಫಿಯನ್ನು ಒದಗಿಸಲು ಏರ್ಪಾಡು ಮಾಡುತ್ತಿದ್ದರು. ಈ ಸೌಕರ್ಯ ಅತಿಥಿಗಳಿಗೆ ಮಾತ್ರ; ಆಶ್ರಮವಾಸಿಗಳಿಗಲ್ಲ. ಶ್ರೀ ರಾಜಾಜಿಯವರಿಗೆ ಕಾಫಿ ಬಹು ಇಷ್ಟ. ಅವರಿಗೆ ಕಾಫಿ ಒದಗಿಸುವ ಜವಾಬ್ದಾರಿಯನ್ನು ನನಗೆ ವಹಿಸಿದ್ದರು. ನನ್ನ ನೈಪುಣ್ಯತೆಯನ್ನು ಪ್ರದರ್ಶಿಸಿ ರಾಜಾಜಿಯವರಿಂದ ಸರ್ಟಿಫಿಕೇಟ್ ಪಡೆದೆ.

ನಾವೆಲ್ಲರೂ ಹಿಂದೀ ಕಲಿಯಬೇಕೆಂದು ಗಾಂಧೀಜಿಯವರ ಆಸೆ. ನಮಗೆ ಅಲ್ಲಿ ಪಾಠ ಹೇಳಿಸಲು ಏರ್ಪಾಡು ಮಾಡಿಕೊಟ್ಟಿದ್ದರು. ಸೇವಾಗ್ರಾಮ

ಹರಿಜನರಿಂದ ಕೂಡಿದ ಸಣ್ಣ ಹಳ್ಳಿ. ಆಶ್ರಮದಿಂದ ಎರಡು ಫರ್ಲಾಂಗ್‌ನಲ್ಲಿದೆ. ಗಾಂಧೀಜಿಯವರು ಅಷ್ಟು ಸಮೀಪದಲ್ಲಿದ್ದರೂ ಆ ಹಳ್ಳಿಯ ಸುಧಾರಣೆ ಆಗುವುದು ಮಹಾ ಪ್ರಯಾಸ. ಅವರ ಪ್ರತಿ ಒಂದು ಯೋಜನೆಯೂ ಹಳ್ಳಿಯವರ ಉದ್ಧಾರಕ್ಕಾಗಿ. ಆಶ್ರಮದ ಪಕ್ಕದಲ್ಲಿ ಮೂಲ ಶಿಕ್ಷಣದ ಪ್ರಯೋಗ ನಡೆಯುತ್ತಿದೆ. ಶ್ರೀ ಆರ್ಯನಾಯಕಂಜೀಯವರೂ ಅವರ ಪತ್ನಿ ಶ್ರೀಮತಿ ಆಶಾದೇವಿಯವರೂ ಹಗಲಿರುಳೂ ದುಡಿಯುತ್ತಿದ್ದಾರೆ. ಅದರ ಮಗ್ಗುಲಲ್ಲೇ ಗೋಶಾಲೆ. ಗಾಂಧೀಜಿಯವರ ಆಸೆಯಿದ್ದುದು ಭಾರತದಲ್ಲಿ ಪ್ರತಿ ಒಬ್ಬರಿಗೂ ಸಾಕಾದಷ್ಟು ಹಾಲು ಒದಗಿಸುವ ಏರ್ಪಾಡು ಮಾಡಬೇಕೆಂದು. ಸೇಟ್ ಜಮ್ನಾಲಾಲ್ ಬಜಾಜರು ಮೃತಿಹೊಂದಿದ ಬಳಿಕ ಅವರ ಧರ್ಮಪತ್ನಿ ಜಾನಕೀ ದೇವಿಯವರು ತಾವು ಯಾವುದಾದರೂ ಒಂದು ಧರ್ಮವನ್ನು ತಮ್ಮ ಪತಿಯ ಹೆಸರಿನಲ್ಲಿ ಮಾಡಬೇಕೆಂದು ಕೇಳಿದಾಗ ಗೋಸೇವಾ ಸಂಘವನ್ನು ಸ್ಥಾಪಿಸಿ ಎಂದು ಗಾಂಧೀಜಿಯವರು ಸೂಚನೆ ಕೊಟ್ಟರು. ಗೋಶಾಲೆ ಪಕ್ಕದಲ್ಲಿ ಖಾದಿ ನಿಲಯವಿರುವುದು. ಅಲ್ಲಿ ಖಾದಿಯಲ್ಲಿ ಎಲ್ಲ ಶಿಕ್ಷಣವನ್ನು ಒದಗಿಸುತ್ತಿದ್ದಾರೆ. ಶ್ರೀ ಕೃಷ್ಣದಾಸ್ ಜಾಜೂಜಿಯವರೇ ಕಾರ್ಯದರ್ಶಿಯವರು. ಸಮಾಜ ಗ್ರಾಮ ಸೇವಾ ಶಿಕ್ಷಣವೂ ಅಲ್ಲೇ ಕೊಡುತ್ತಾರೆ. ವರ್ಧಾದಲ್ಲಿ ಮಗನವಾಡಿಯಲ್ಲಿ ಅಖಿಲ ಭಾರತ ಗ್ರಾಮೋದ್ಯೋಗ ಸಂಘವಿದೆ. ಅದಕ್ಕೆ ಶ್ರೀ ಜೆ. ಸಿ. ಕುಮಾರಪ್ಪನವರೇ ಮಂತ್ರಿಗಳು. ವಾರ್ಧಾದಲ್ಲಿ ಮಹಿಳಾಶ್ರಮವೊಂದಿದೆ. ಮಹಿಳೆಯರಿಗೆ ಸಮಾಜ ಸೇವೆಗಾಗಿ ಶಿಕ್ಷಣ ಕೊಡುತ್ತಿದ್ದಾರೆ. ವಾರ್ಧಾದಲ್ಲಿ ಆಚಾರ್ಯ ಶ್ರೀ ಕಾಕಾ ಕಾಲೇಲ್ಕರ ತಮ್ಮ ಹಿಂದುಸ್ಥಾನಿ ಸಂಶೋಧನೆ ನಡೆಸುತ್ತಿದ್ದಾರೆ. ಗಾಂಧೀಜಿಯವರ ಕೊನೆ ಯೋಜನೆ ಕಸ್ತೂರಿ ಬಾ ಗಾಂಧಿ ಸ್ಮಾರಕ ಟ್ರಸ್ಟ್. ಅವರ ಧರ್ಮಪತ್ನಿಯವರ ಹೆಸರಿನಲ್ಲಿ ಗ್ರಾಮಗಳಲ್ಲಿಯ ಹೆಣ್ಣು ಮಕ್ಕಳ ಮತ್ತು ಸಣ್ಣಮಕ್ಕಳ ತಿಳುವಳಿಕೆ ಉದ್ಧಾರಕ್ಕಾಗಿ ನಿರ್ಮಿಸಿರುವ ನಿಧಿ. ದೇಶೋನ್ನತಿಯಾಗಬೇಕಾದರೆ ಹೆಣ್ಣು ಮಕ್ಕಳೂ ಸಹ ಪಾಟಿಗಳಾಗಿ ದುಡಿಯಬೇಕು. ಭಾರತೀಯರು ಚೈತನ್ಯದಿಂದ ಕೂಡಿದ ನೂತನ ಜನಾಂಗವಾಗಬೇಕಾದರೆ ಸಣ್ಣ ಮಕ್ಕಳ ದೆಸೆಯಿಂದ ಶಿಕ್ಷಣ ಕೊಡಬೇಕೆಂಬುದೇ ಅವರ ಅಭಿಪ್ರಾಯ.

ಒಂದು ದಿನ ಮಾತನಾಡುತ್ತಾ ಅವರು ತಿಳಿಸಿದರು : ‘ ನನಗೂ ಇತರರಿಗೂ ಏನು ವ್ಯತ್ಯಾಸವೆಂದರೆ—ನಾನು ೨೪ ಗಂಟೆಯೂ ದೀನರ ದಲಿತರ ಧ್ಯಾನ ಮಾಡುತ್ತಿರುತ್ತೇನೆ. ಅಷ್ಟೇ ವ್ಯತ್ಯಾಸ ’ವೆಂದರು. ಇದು ಸತ್ಯ.

ಗಾಂಧೀಜಿಯವರ ಜನ್ಮೋತ್ಸವ ನಡೆಸಿದರೆ ಸಾಲದು. ಅವರ ತತ್ತ್ವಗಳಿಗನುಸಾರವಾಗಿ ನಡೆಯಬೇಕು. ಇದು ಸುಲಭಸಾಧ್ಯವಲ್ಲ. ಜಾತಿ ಮತಭೇಧಗಳಿಂದ ಕೂಡಿದ ಈ ನಾಡು ಒಂದಾಗಬೇಕಾದರೆ—ಬಡತನ, ಅಜ್ಞಾನ, ಅನಾರೋಗ್ಯ ಇವುಗಳಿಂದ ದೂರವಾಗಬೇಕಾದರೆ—ದೇಶದಲ್ಲಿ ಶಾಂತಿ ಸುಖ ನೆಲಸಬೇಕಾದರೆ ಗಾಂಧೀಜಿಯವರು ಹಾಕಿಕೊಟ್ಟಿರುವ ಮಾರ್ಗ ಒಂದೇ.





# ಗಾಂಧಿಯವರ ಬೀಡಾರದಲ್ಲಿ

**ಕೆ. ವಿ. ರಾಘವಾಚಾರ್**

ಗಾಂಧಿಯವರ ಬೀಡಾರದಲ್ಲಿ ಕಳೆದ ಒಂದು ದಿನವನ್ನು ಕುರಿತು ಮಾತಾಡಲಿದ್ದೇನೆ. ಸಬರಮತಿಯಂಥ ನೆಲೆವೀಡಾರದಲ್ಲಿ ತಂಗಿರುವ ಸೈಪು ಸನ್ನದಾಗಿರಲಿಲ್ಲ. ಆದರೆ ಅವರ ಅಲೆವೀಡಾರಗಳು ಕೆಲವಲ್ಲಿ ಇದ್ದು ಅವರ ಸೇವೆ ಮಾಡುವ ಭಾಗ್ಯ ನನಗಿತ್ತು. ೧೯೨೭ನೆಯ ವರ್ಷದ ಬೇಸಗೆಯನ್ನು ಮಹಾತ್ಮಜೀಯವರು ಆರೋಗ್ಯನಿಮಿತ್ತ ಮೈಸೂರು ದೇಶದಲ್ಲಿ ನಂದಿಯಲ್ಲಿಯೂ ಬೆಂಗಳೂರಿನಲ್ಲಿಯೂ ಕಳೆದರು. ಬೆಂಗಳೂರಿನಲ್ಲಿ ಅವರ ಬೀಡಾರ ಕುಮಾರ ಪಾರ್ಕಿನಲ್ಲಿ ಏರ್ಪಟ್ಟಿತ್ತು. ಆ ಸಮಯದಲ್ಲಿ ಭರತಖಂಡದ ನಾನಾ ಭಾಗಗಳಿಂದ ರಾಜಕೀಯ ಪ್ರಮುಖರೂ ಇತರರೂ ಕುಮಾರ ಪಾರ್ಕಿಗೆ ಬಂದು ಹೋಗುತ್ತ, ಆ ಭವನ ರಾಜಧಾನಿಯಂತೆ ಸಡಗರದಿಂದ ಮೆರೆಯುತ್ತಿತ್ತು. ಆ ಬೀಡಾರದಲ್ಲಿ ಗಾಂಧಿಯವರ ಸೇವೆಯಲ್ಲಿ ಹಲವು ದಿನಗಳನ್ನು ಕಳೆಯುವ ಪುಣ್ಯ ನನಗೆ ಒದಗಿತ್ತು. ಆ ದಿನಗಳಲ್ಲಿ ಒಂದನ್ನು ಆದುಕೊಂಡು ಮುಂಬೈಗಿನಿಂದ ನಟ್ಟಿರುಳವರೆಗೆ ನಡೆಯುತ್ತಿದ್ದ ಕಾರ್ಯಕಲಾಪಗಳ ಸ್ಥೂಲ ಪರಿಚಯವನ್ನು ಮಾಡಿಕೊಡಬಯಸುತ್ತೇನೆ. ಯಾವುದೊ ಒಂದು ದಿನವನ್ನು ನಿರ್ದೇಶಿಸಿದ್ದರೂ ಇತರ ದಿನಗಳಲ್ಲಿ ನಡೆದಿರಬಹುದಾದ ಒಂದೆರಡು ಸಂಗತಿಗಳನ್ನು ಆ ನಿರ್ದಿಷ್ಟದಿನದ ಕಾರ್ಯಕಲಾಪಗಳಲ್ಲಿ ಸೇರಿಸಿ ಒಂದು ದಿವಸದ ಸಮಗ್ರ ಚಿತ್ರ ಮೂಡುವಂತೆ ಪ್ರಯತ್ನಿಸುತ್ತೇನೆ. ಇಲ್ಲಿ ಬೇಕೆಂದು ಗಾಂಧಿಯವರಿಗಿಂತ ಗಾಂಧೀಪರಿವಾರದವರನ್ನೂ, ರಾಜಕೀಯಕ್ಕಿಂತ ಸಾಮಾನ್ಯ ನಿತ್ಯವಿಷಯಗಳನ್ನೂ ಕುರಿತು ಪ್ರಸ್ತಾಪಿಸುತ್ತೇನೆ.

ಬಾಪೂಜಿಯ ಬೀಡಾರದಲ್ಲಿ ಬೆಳಗಾಗುವುದು ಬೆಳಗಿನ ಜಾವದ ನಾಲ್ಕು ಗಂಟೆಗೆ. ಎಲ್ಲರಿಗಿಂತ ಮೊದಲು ಏಳುವವರು ಮಹದೇವ ದೇಸಾಯಿಯವರು. ಅವರು ಎದ್ದು ಮಿಕ್ಕವರನ್ನು ಎಬ್ಬಿಸುತ್ತಾರೆ. ಎಲ್ಲರೂ ಬೀಡಾರದ ಬಾಳಿನಲ್ಲಿ ನಿಡುಗಾಲ ಪಳಗಿದ ಹಿರಿಯರಾದರೂ, ಒಂದು ಕಡೆಯಿಂದ ಎಬ್ಬಿಸುತ್ತ ಹೋದರೆ ಮತ್ತೊಂದು ಕಡೆಯಿಂದ ಎದ್ದವರು ಹಾಗೆಯೇ ಮಲಗುತ್ತ

ಹೋಗುತ್ತಿದ್ದ ದೃಶ್ಯ ಅಷ್ಟು ಅಪರೂಪವೇನೂ ಅಲ್ಲ. ಎದ್ದೊಡನೆ ಬಾಪೂಜಿಗೆ ಮುಖ ತೊಳೆಯಲು ಮಹದೇವರು ಸಲಕರಣೆಗಳನ್ನು ಒದಗಿಸಬೇಕು. ರಾತ್ರಿ ಕಾಯಿಸಿ, ಕುದಿಸಿ, ಸೋಸಿ ಕಂಚಿನ ತಿರುವುತಂಬಿಗೆಯಲ್ಲಿ ತುಂಬಿ, ತಾವು ಆರದಂತೆ ಉಣ್ಣೆಯ ಶಾಲಿನಲ್ಲಿ ಸುತ್ತಿ ಇಟ್ಟಿರುತ್ತಿದ್ದ ಬಿಸಿನೀರನ್ನೂ, ನುರಿತ ಸೇವಕರ ಕೈಯಲ್ಲಿ ಬಲು ಎಚ್ಚರಿಕೆಯಿಂದ ಮಾಡಿಸಿ ತರುವಾಯ ತಾವೇ ತಮ್ಮ ಕೈಯಿಂದ ಕೊನೆಯ ಪೆಟ್ಟನ್ನು ಕೊಟ್ಟು ಸಯವಾಗಿ ಮಾಡಿಟ್ಟ ಬೇವಿನ ಕುಂಚವನ್ನೂ ಗಾಂಧಿಗೆ ಕೊಡುತ್ತಾರೆ. ಅವರು ಮುಖ ತೊಳೆದು ಬರುವ ಹೊತ್ತಿಗೆ ಬೀಡಾರದ ಇತರರೂ, ಹರಿದಾರಿಗಳು ನಡೆದುಬಂದ ಪಟ್ಟಣಿಗರು ಹಲವರೂ ಪ್ರಾರ್ಥನಾ ಸ್ಥಳದಲ್ಲ ನಿಶ್ಯಬ್ದವಾಗಿ ನೆರೆದಿರುತ್ತಾರೆ. ಭಜನೆಗೆ ತೊಡಗಿ "ರಘುಪತಿ ರಾಘವ ರಾಜಾರಾಂ" ಘೋಷ ಸುತ್ತಲ ವಾತಾವರಣವನ್ನೆಲ್ಲ ತುಂಬಿ ಮೊರೆಯುತ್ತದೆ. ತರುವಾಯ ಮಹದೇವಭಾಯಿಯವರು ಪದ್ಧತಿಯ ಗೀತಾಶ್ಲೋಕಗಳನ್ನು ಪಠಿಸುತ್ತಾರೆ. ಇತರ ಕೆಲವು ಹಾಡುಗಳಾದ ಮೇಲೆ ಎಲ್ಲರೂ ಅವರವರ ಕೆಲಸಕ್ಕೆ ತೆರಳುತ್ತಾರೆ. ಕೆಲವರು ಮತ್ತೆ ಮಲಗ ಹೋಗುವದೂ ಉಂಟು.

ಗಾಂಧಿ ಬೀಡಾರದಲ್ಲಿ ಕಾಫಿ ಕಾಯಿಸುವದು ಬಟ್ಟಲು ಲೆಕ್ಕದಲ್ಲಲ್ಲ! ತಪ್ಪಲೆ ಲೆಕ್ಕದಲ್ಲಿ. ಮಹಾತ್ಮರೊಬ್ಬರನ್ನು ಬಿಟ್ಟರೆ ಅವರ ಪರಿವಾರದವರಲ್ಲಿ ಕುಡಿಯದವರು ಯಾರೂ ಇಲ್ಲವೆನ್ನಬಹುದು. ಕಸ್ತೂರಿಬಾಯವರೂ ಕುಡಿಯುತ್ತಿದ್ದರು. ಬಿಸಿ ಬಿಸಿ ಕಾಫಿಯನ್ನು ತೆಗೆದುಕೊಂಡು ಹೋಗಿ ಕೊಟ್ಟರೆ ಬಟ್ಟಲನ್ನು ಹಾಗೆಯೇ ಕೈಯಲ್ಲಿಟ್ಟುಕೊಂಡು "ಮಹದೇವಭಾಯಿಗೆ ಆಯಿತೆ?" ಎಂದು ಕೇಳಿ "ಆಯಿತು" ಎಂದು ಹೇಳಿದ ಮೇಲೆಯೇ ಆ ತಾಯಿ ಕುಡಿಯುವರು. ಯಾವ ತಿಂಡಿ ತೀರ್ಥ, ಹಣ್ಣು ಹಂಪಲನ್ನು ಕೊಟ್ಟರೂ "ಮಹದೇವಭಾಯಿಗೆ ಆಯಿತೆ?" ಎಂದು ಕೇಳದೆ ಆಕೆ ಬಾಯಿಗೆ ಹಾಕುತ್ತಿರಲಿಲ್ಲ. ಆ ಬೆಳಗ್ಗೆ ಬೀಡಾರದ ಬಹು ಮಂದಿ ಕಾಫಿ ತಿಂಡಿ ತೀರಿಸಿ ಹೋದ ಮೇಲೆ ಊಟದ ಮನೆಯಲ್ಲಿ ಕಾರ್ಯಾರ್ಥವಾಗಿ ರಾಜಗೋಪಾಲಾಚಾರಿಯವರು ಮಹದೇವ ದೇಸಾಯಿಯವರು, ಗಂಗಾಧರರಾವ ದೇಶಪಾಂಡೆಯವರು, ನಾನು ನಾಲ್ವರು ಉಳಿದುಕೊಂಡೆವು. "ವೈಷ್ಣವ ಜನತೋ" ಹಾಡನ್ನು ಕನ್ನಡದಲ್ಲಿ ಕಟ್ಟಿಸಿ ಹಾಡಿಸಬೇಕೆಂದು ಗಾಂಧಿಯವರ ಇಷ್ಟವಾಗಿತ್ತು. ಅರ್ಥ ತಿಳಿಸಿದರೆ ಹಾಡು ಕಟ್ಟಿಕೊಡುವುದಾಗಿ ಸೋದರಿಯೊಬ್ಬರು ಹೇಳಿದ್ದರು. ಆ ಪದ್ಯಾರ್ಥ ಲೇಖನಕ್ಕಾಗಿ ನಾವು ನಾಲ್ಕು ಮಂದಿ ಕುಳಿತೆವು. ಗುಜರಾತಿ ಹಾಡಿನ ಚರಣ ಚರಣವನ್ನೂ ನುಡಿದುಕೊಂಡು ಅರ್ಥವನ್ನು ಹಿಂದಿ

ಯಲ್ಲಿಯೂ ಇಂಗ್ಲಿಷಿನಲ್ಲಿಯೂ ವಿವರಿಸುವದು ಮಹದೇವರ ಕೆಲಸ. ಅದನ್ನು ಕನ್ನಡ ಮಾತುಗಳಲ್ಲಿ ಅಳವಡಿಸುವದು ಗಂಗಾಧರರಾಯರ ಕೆಲಸ. ಒಪ್ಪಿಗೆಯ ಮುದ್ರೆಯನ್ನೊತ್ತುವದು ರಾಜಾಜಿಯವರ ಕೆಲಸ. ಈ ಮೂವರದೂ ಮೆದುಳಿನ ಕೆಲಸ. ನನ್ನದೆಂದರೆ ಬರಿಯ ಕೈಕೆಲಸ—ಹೇಳಿದ್ದನ್ನು ಬರೆದುಕೊಳ್ಳುವದು. ನಾನು ಆಗ ಬಿ.ಎ. ತರಗತಿಯಲ್ಲಿ ಓದುತ್ತಿದ್ದೆನಾದ್ದರಿಂದ ಕೈ ಓಟದ ಜತೆಗೆ ಒಮ್ಮೊಮ್ಮೆ ಮೆದುಳೂ ಕೆರಳುತ್ತಿತ್ತು. ಗಂಗಾಧರರಾಯರ ಪಿರೋಜ್ನಾಲ ಸಿಂಹವಾಣಿ "ವೈಷ್ಣವ ಜನತೋ" ಹಾಡಿನ ವಿನಮ್ರ, ಮಧುರ ಭಕ್ತಿ ಭಾವಕ್ಕೆ ಅಷ್ಟಾಗಿ ಹೊಂದಿಕೊಳ್ಳುತ್ತಿದ್ದಂತೆ ನನಗೆ ಅನಿಸುತ್ತಿರಲಿಲ್ಲ. ಹೀಗಾಗಿ ರಾಯರ ಅನುವಾದದಲ್ಲಿ ಅಲ್ಲಲ್ಲಿ ನಸುತುಸ ಮಾರ್ಪಾಡುಗಳನ್ನು ಸೂಚಿಸುವ ಸಾಹಸವನ್ನು ನಾನು ಮಾಡಬೇಕಾಯಿತು. ಒಪ್ಪಿಗೆಯ ಮುದ್ರೆಯನ್ನೊತ್ತಬೇಕಾಗಿದ್ದ ರಾಜಾಜಿಯವರು, ಏಕೋ ಏನೋ ಸಾಲು ಸಾಲಿಗೂ ನನ್ನ ಮಾರ್ಪಾಟನ್ನು ಮೆಚ್ಚುತ್ತ ಬಂದರು. ಸಹನೆ ಮೀರುತ್ತ ಬಂದು, ಹಾಡು ಇನ್ನೂ ಅರ್ಧ ಮುಗಿಯುವುದರಲ್ಲಿಯೇ, ಕರ್ನಾಟಕ ಕೇಸರಿ ಕೆರಳಿ, ಮೈ ಕೈ ಕೊಡವಿಕೊಂಡು ಎದ್ದೇಬಿಟ್ಟಿತು. ಹಿರಿಯರಿಬ್ಬರೂ ಎಷ್ಟೇ ಸಮಾಧಾನ ಪಡಿಸಿದರೂ ತಾಳದೆ, "ಏನ್ರೀ, ನಿಮ್ಮ ಕನ್ನಡ, ಮೈಸೂರು ಕನ್ನಡ, ಸಪ್ಪೆ ಕನ್ನಡ" ಎಂದುಕೊಂಡು ರಾಯರು ಆವೇಶದಲ್ಲಿ ಹೊರಟೇಬಿಟ್ಟರು. ಮಿಕ್ಕ ಮೂವರೇ ವಿಧಿ ಇಲ್ಲದೆ ಕೆಲಸ ಸಾಗಿಸಿದೆವು.

ತರುವಾಯ ಕಸ್ತೂರಿಬಾಯವರ ಅಡಿಗೆಯ ಮನೆಗೆ ಹೋಗಿ ಪಾತ್ರೆ ತೊಳೆಯ ತೊಡಗಿದೆ. ಪಾತ್ರೆ ತೊಳೆವ, ಅಡಿಗೆ ಮಾಡುವ ಕೆಲಸಕ್ಕೆ ಹೊಸಬನಲ್ಲದಿದ್ದರೂ ಆ ಮಾತಾಯಿಯ ಕೈಯಿಂದ ಮೆಚ್ಚುಗೆ ಪಡೆಯಬೇಕೆಂದು ಅತ್ಯುತ್ಸಾಹ ಧೀರ ಸಂಕಲ್ಪಗಳಿಂದ ಒಂದೇ ಪಾತ್ರೆಯನ್ನು ಅರ್ಧಘಂಟೆ ಉಜ್ಜಿ ತಿಕ್ಕಿ, ರಾಶಿ ಕೆಮ್ಮಣ್ಣು ಹುಣಿಸೆಹಣ್ಣನ್ನು ಸವಸಿ, ಒಂದು ತೊಟ್ಟಿ ನೀರನ್ನು ಬರಿದುಮಾಡಿ, ತೊಳೆದು ಬೆಳಗಿ ಮಿಂಚುತ್ತಿದ್ದ ಪಾತ್ರೆಯನ್ನು ಆಕೆಯ ಕೈಗೆ ಹೆಮ್ಮೆಯಿಂದ ತೆಗೆದುಕೊಂಡು ಹೋಗಿ ಕೊಟ್ಟೆ. ಕೊಟ್ಟೊಡನೆಯೇ ಆಕೆ ತನ್ನ ಮುದುಗಣ್ಣಾಡಿಸಿ, ಎಡಗೈಯಲ್ಲಿ ಪಾತ್ರೆಯನ್ನು ಹಿಡಿದುಕೊಂಡು, ಬಲಗೈಯ ಮೃದು ಹಸ್ತವನ್ನು ನನ್ನ ತಲೆಯ ಮೇಲಿಟ್ಟು, ನನ್ನ ಕಣ್ಣನ್ನು ಪಾತ್ರೆಯೊಳಗಿನ ಒಂದು ಕಡೆಗೆ ತಿರುಗಿಸಿದರು. ಒಡನೆಯೇ ಸೂಜಿಮೊನೆಗಿಂತ ಸೂಕ್ಷ್ಮವಾದ ಕರೆಯೊಂದು ಅಂಟಿಕೊಂಡುದು ಕಾಣಿಸಿತು. ಅರ್ಧಘಂಟೆಯ ಉಜ್ಜಿಗೆ, ರಾಶಿ ಹುಣಿಸೆ ಹಣ್ಣು, ಕೆಮ್ಮಣ್ಣಿನ ಸವೆತ, ಒಂದು ತೊಟ್ಟಿ ನೀರಿನ ತೊಳೆತ ಇವೆಲ್ಲವನ್ನೂ ಮೀರಿ ನಿಂತಿದ್ದ ಆ ಸೂಜಿ ಮೊನೆಯಷ್ಟು

ಕರೆ ಆ ಮುತ್ತಜ್ಜಿಯ ಕಣ್ಣು ಪಳತವನ್ನು ತೋರಿಸಿದ್ದು ಮಾತ್ರವಲ್ಲದೆ ನನ್ನ ನುರಿಯದ, ಹರೆಯದ ಹೆಮ್ಮೆಯನ್ನು ಮುರಿಯಿತು.

ನಡುಹಗಲು ಹನ್ನೆರಡು ಘಂಟೆ. ಇನ್ನು ಊಟದ ಸಡಗರ. ಗಾಂಧಿಯವರಿಗೆ ತನಿಯಾಗಿ ಆಡಹಾಲು, ದ್ರಾಕ್ಷಿ, ಖರ್ಜೂರಗಳ ಊಟದ ಏರ್ಪಾಟು. ಹಾಗೆಯೇ ನವ ಶಿಷ್ಯಾವೃತ್ತಿಯ ಹುರುಪಿನಲ್ಲಿದ್ದ ಮೀರಾಬೆನ್‌ಗೂ ಪ್ರತ್ಯೇಕವಾದ ಏರ್ಪಾಟು. ಮಿಕ್ಕೆಲ್ಲರಿಗೂ ಸಮಾರಾಧನೆಯ ಊಟ. ಪ್ರಾಸಂಗಿಕವಾಗಿ ಒಂದು ಮಾತು: ಮೀರಾಬೆನ್ ಅವರದು ಹೊಸ ಹುರುಪು ಎಂದೆನು. ಪ್ರತಿಯೊಂದು ಅಂಶದಲ್ಲಿಯೂ ವಿವರದಲ್ಲಿಯೂ ಗಾಂಧಿಯವರಂತೆಯೇ ನಡೆಯಬೇಕೆಂಬುದು ಅವರ ಕಡುಹಟ. ಊಟದಲ್ಲಿ ಕಟ್ಟುನಿಟ್ಟು; ವಾರಕ್ಕೊಮ್ಮೆ ಮೌನವ್ರತ; ತೀವ್ರ ಹಿಂದೀ ಅಭ್ಯಾಸ. ಇದಕ್ಕೆ ಸರಿತೂಕವಾದ ಅಥವಾ ಮಿಗಿಲಾದ ಗಾಂಧೀ ಶುಶ್ರೂಷೆಯನಿಷ್ಠೆ. ಮೀರಾಬೆನ್ ಅವರ ಉತ್ಕಟಗುರುಸೇವಾಭರದಲ್ಲಿ ತಮ್ಮದಾಗಿ ಉಳಿದಿದ್ದ ಒಂದೇ ಒಂದಾದ ವೃದ್ಧ ಪತಿ ಸೇವಾ ಕ್ಷೇತ್ರವೂ ಎಲ್ಲಿ ಕೈತಪ್ಪಿಹೋಗುವುದೋ ಎಂಬ ಶಂಕೆ ಒಮ್ಮೊಮ್ಮೆ ಕಸ್ತೂರಿಬಾಯವರಿಗೆ ತಟ್ಟಿತ್ತೆಂದು ತೋರುತ್ತಿತ್ತು. ಇದನ್ನು ಅಪಚಾರದ ಮಾತೆಂದು ಯಾರೂ ತಿಳಿಯಬಾರದು. ಮಹದೇವಭಾಯ್ ಅಂಥವರ ಪವಿತ್ರ ಭ್ರಾತೃಪ್ರೇಮದ ಭಾಗ್ಯ ಆ ತಾಯಿಗೆ ಇಲ್ಲದೇ ಹೋಗಿದ್ದರೆ ಈ ಶಂಕಾ ಭಾವನೆ ಅಸಹನೆಗೆ ಇಟ್ಟುಕೊಳ್ಳುತ್ತಿತ್ತೊ ಏನೊ! ಇರಲಿ. ಕಸ್ತೂರಿಬಾಯವರ ಅಡಿಗೆಯ ಮನೆಯಲ್ಲಿ ಮಣೆಹಾಕಿ ತಟ್ಟೆಯಲ್ಲಿ ಎಲ್ಲವನ್ನೂ ಬಡಿಸಿ, ಮೀರಾಬೆನ್ ಅವರ ಕೋಣೆಗೆ ಹೋಗಿ "ಊಟ ಅಣಿಯಾಗಿದೆ" ಎಂದು ಹೇಳಿ ಬಂದೆನು. ಅಷ್ಟರೊಳಗಾಗಿ ಊಟಕ್ಕಾಗಿ ಕೆಳಗೆ ಇಳಿದು ಹೋಗುವದರಲ್ಲಿದ್ದ ಕಸ್ತೂರಿಬಾಯವರು, ಏಕೋ ಏನೋ, ತಮ್ಮ ಅಡಿಗೆಯ ಮನೆಯೊಳಕ್ಕೆ ಹೋಗಿದ್ದರು. ಮೀರಾಬೆನ್‌ಗಾಗಿ ತಟ್ಟೆಯಲ್ಲಿಟ್ಟಿದ್ದ ರೊಟ್ಟಿ, ಪಲ್ಯ, ಹಾಲು, ಹಣ್ಣುಗಳನ್ನು ನೋಡಿದರು. ಆ ಹಣ್ಣುಗಳಲ್ಲಿ ಯಾವುದೊ ಒಂದು ಹಣ್ಣು—ಈಗ ನನ್ನ ನೆನಪಿಗೆ ಬಾರದು, ಆದರೆ ಬೀಡಾರದಲ್ಲೆಲ್ಲ ಇದ್ದದ್ದು ಅದೊಂದೇ ಹಣ್ಣು—ಅವರ ಕಣ್ಣಿಗೆ ಬಿತ್ತು. ನನ್ನನ್ನು ಕಂಡೊಡನೆ ಆ ಹಣ್ಣನ್ನು ಎಡಗೈಯಲ್ಲಿ ತೆಗೆದುಕೊಂಡು ಬಲಗೈಯಿಂದ ನನ್ನ ಗಲ್ಲವನ್ನು ಸವರುತ್ತ, ನೀರ್ಮುತ್ತಾಡಿದ ಕಣ್ಣಿಂದ, "ಇದನ್ನು 'ಬಾಪೂ'ಜಿಗೆ ಕೊಡುವದಿಲ್ಲವೇ ?" ಎಂದರು. ಆ ಮರ್ಮ ಭೇದಕವಾದ ಮಾತು ಕಿವಿಹೊಕ್ಕು, ಮನನಾಟಿದ್ದಕ್ಕಿಂತ ಹೆಚ್ಚಾಗಿ, ಆ ತಾಯಿ ನಿಂತ ನೋಟ ನನ್ನ ಕಣ್ಣೀರಿದು ಕರುಳನ್ನು ಹಿಂಡಿತು. ಗಾಂಧೀಜಿಯವರು ಆ ಹಣ್ಣನ್ನು ತಿನ್ನಲಾರರೆಂಬ ಎಣಿಕೆಯಿಂದ ಅದನ್ನು

ಮೀರಾಬೆನ್‌ಗೆ ಬಡಿಸಿದ್ದರೂ, ಆ ಅವಸ್ಥೆಯಲ್ಲಿ ನಾನು 'ಬಾ' ಅವರ ಮುಂದೆ ಕಂಗೆಟ್ಟು ಮಹಾಪರಾಧಿಯಂತೆ ನಿಂತು ಕ್ಷಮೆ ಬೇಡಿದೆನು. ಆ ಹಣ್ಣನ್ನು ತೆಗೆದು ಬೇರೆ ಇಡುವದಾಗಿ ಹೇಳಲು, ಆ ತಾಯಿ ಕಣ್ಣರಳಿಸಿ, "ಹಾಗೆ ಮಾಡಪ್ಪಾ" ಎಂದರು. ಅದನ್ನು ಗಾಂಧಿಯವರಿಗಾಗಿ ಕಸ್ತೂರಿಬಾ ಅವರ ಕೈಯಲ್ಲಿ ಕೊಟ್ಟೆನು. ಆಗ ಆ ತಾಯಿಗೆ ಆದ ಸಂತೋಷಕ್ಕೂ, ನನ್ನ ಮೇಲೆ ಸೂಸಿದ ಪುತ್ರವಾತ್ಸಲ್ಯಕ್ಕೂ ಪಾರವೇ ಇರಲಿಲ್ಲ! ನನ್ನ ಕೆನ್ನೆಗೆ ಮುತ್ತಿಟ್ಟೆ ಮುತ್ತಿಡುವದೊಂದೇ ಮಿಕ್ಕಿತ್ತು!!

ಇನ್ನು ಸಮಾರಾಧನೆಯ ಊಟದ ಮನೆ. ಎಲ್ಲರೂ ಅಚ್ಚುಕಟ್ಟಾಗಿ ಕೂತಿದ್ದಾರೆ. ಅಡಿಗೆಯವರೂ ಸೇವಾದಲದ ಕೆಲವು ಸೇವಕರೂ ಬಡಿಸಲು ಸಿದ್ಧವಾಗಿದ್ದೇವೆ. ಆಗ ಮಹದೇವ ದೇಸಾಯಿಯವರು ತಮ್ಮ ಅಡುವಣೆಯನ್ನು (ಕುಕ್ಕರ್) ತರುವಂತೆ ಹೇಳಿದರು. ಮುಂಬೆಳಗಿಂದ ನಟ್ಟಿರುಳವರೆಗೆ ಒಂದೇ ಸಮನೆ ಬಿಡುವಿಲ್ಲದೆ ದುಡಿಯುತ್ತಿದ್ದರೂ, ಜೀಡಾರಕ್ಕೆಲ್ಲ ಅಡಿಗೆ ಪರಿಚಾರಕರ ಏರ್ಪಾಟು ಸಮರ್ಪಕವೂ ಸಮೃದ್ಧವೂ ಆಗಿದ್ದರೂ, ಒಮ್ಮೊಮ್ಮೆ ವಿನೋದಕ್ಕಾಗಿಯೊ, ಇಲ್ಲವೆ ದಕ್ಷಿಣ ದೇಶದ ಊಟ ಬೇಸರವಾಗಿಯೊ, ಅಡುವಣೆಯಲ್ಲಿ ತಮ್ಮ ಅಡಿಗೆಯನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಅಂಥ ಒಂದು ದಿನ ಈ ದಿನ. ನಾನು ಒಳಗೆ ಹೋಗಿ ಅಡುವಣೆಯನ್ನು ತಂದಿಟ್ಟೆ. ಪಂಕ್ತಿಯವರೆಲ್ಲರೂ ಆಗಲೇ ಬಡಿಸಿ ಸಿದ್ಧವಾಗಿರುವ ಎಲೆಗಳ ಮುಂದೆ ತವಕಿಸುತ್ತ ಮಿಟಮಿಟನೆ ಕೂತಿದ್ದಾರೆ—ದೇಸಾಯಿಯವರು ತಮ್ಮ ಅನ್ನವನ್ನು ಎಲೆಗೆ ಹಾಕಿಕೊಳ್ಳುವದೇ ತಡ, ಆರಂಭಿಸೋಣವೆಂದು! ದೇಸಾಯಿಯವರು ಬಿಗಿಯಾಗಿ ಕಚ್ಚಿಕೊಂಡಿದ್ದ ಅಡುವಣೆಯ ಮುಚ್ಚಳವನ್ನು ಕಷ್ಟಪಟ್ಟು ಬಲವಂತವಾಗಿ ಎಳೆದು ತೆಗೆದು, ಮೇಲಿನ ಬಟ್ಟಲನ್ನು ಕಳಚಿ, ಹಾಗೆಯೇ ಎಲೆಗೆ ಸುರಿದುಕೊಂಡರು. ಬಿರು ಮುಳ್ಳಿನ ಒಣ ಅಕ್ಕಿಯ ಕಾಳುಗಳು ಎಲೆಯ ಮೇಲೆಲ್ಲ ಸಿಡಿದುನಿಂತವು. ದೇಸಾಯಿಯವರು ಗೊಳ್ಳೆಂದು ನಕ್ಕರು. ಎಲ್ಲರೂ ನಕ್ಕರು! ಅಡುವಣೆಯನ್ನು ಮುಚ್ಚಿ ಅಗ್ಗಿಷ್ಟಿಗೆಯ ಮೇಲೆ ಇಡುವಾಗ, ಯಾವುದೊ ಜ್ಞಾನದಲ್ಲಿದ್ದ ಅವರು, ಅಕ್ಕಿಯ ಬಟ್ಟಲಿಗೆ ನೀರು ಹಾಕುವದನ್ನೇ ಮರೆತುಬಿಟ್ಟಿದ್ದರು! ಅಡಿಗೆಯವನು ಮಾಡಿದ ಅನ್ನವನ್ನೇ ಬಡಿಸಿಕೊಂಡು ಊಟ ತೊಡಗಿದ್ದಾಯಿತು. ಈ ಸಂದರ್ಭದಲ್ಲಿ ನಾನು ಸುಮ್ಮನಿರದೆ, ನನ್ನ ಬೆಪ್ಪುತನವನ್ನು ಮೆರೆದೆ. ಬೆಳಗ್ಗೆ ಅಡುವಣೆಯಲ್ಲಿ ಸಾಮಗ್ರಿಗಳನ್ನೆಲ್ಲ ಅಳವಡಿಸುತ್ತಿದ್ದಾಗ ಅಕ್ಕಿಯ ಬಟ್ಟಲಿಗೆ ನೀರು ಹಾಕದೆ ಇದ್ದದ್ದನ್ನು ನೋಡಿದ್ದೆ. ಆದರೂ ಕುಕ್ಕರ್ ಅಡಿಗೆಯ ಅನುಭವ ಇಲ್ಲದ್ದರಿಂದ "ಅದರಲ್ಲಿ

ನೀರು ಇಲ್ಲದೆಯೇ ಅಕ್ಕಿ ಬೇಯುತ್ತದೆಯೊ ಏನೊ!" ಎಂಬ ವಿಚಿತ್ರ ತಿಳಿವಳಿಕೆಯಿಂದ ಕುತೂಹಲವನ್ನು ತಡೆದುಕೊಂಡು ಬಾಯಿ ಮುಚ್ಚಿಕೊಂಡಿದ್ದೆ. ಆಗ ಮುಚ್ಚಿಕೊಂಡಿದ್ದ ಬಾಯಿ ಈಗಲೂ ತೆರೆಯದೇ ಇದ್ದರೆ ಚೆನ್ನಾಗಿತ್ತು. ಎಲ್ಲರ ಪ್ರತ್ಯಕ್ಷದಲ್ಲಿ ದೇಸಾಯಿಯವರ ಮುಂದೆ ಈ ಸಂಗತಿಯನ್ನು ಹೇಳಿದಾಗ, ಬಿ.ಎ. ತರಗತಿಯಲ್ಲಿ ವಿಜ್ಞಾನ ಪಾಠ ಓದುತ್ತಿದ್ದ ನನ್ನ ಬುದ್ಧಿವಂತಿಕೆಯನ್ನು ಕಂಡು ನಕ್ಕರು. ವಸ್ತುತಃ ನನ್ನ ಮೌಢ್ಯವನ್ನು ಟೀಕಿಸುತ್ತ, ಆಪಾತತಃ ನನ್ನ ಕುತೂಹಲ ಸಂಯಮವನ್ನು ಹೊಗಳಿದರು. ಊಟ ಮುಂದುವರಿಯಿತು. ಬಗೆಬಗೆಯ ಕಾಯಿಪಲ್ಯಗಳು, ಭಕ್ಷ್ಯಭೋಜ್ಯಗಳನ್ನು ಮಾಡಿತ್ತು. ಸಾವಧಾನವಾಗಿ ಊಟಮಾಡುತ್ತ ನಡುವೆ ರಾಜಾಜಿಯವರು "ಕೂಟು ಮಾಡಿಲ್ಲವೇ?" ಎಂದು ಕೇಳಿದರು. ಕೂಟೆಂದರೆ ಅವರಿಗೆ ಅಷ್ಟು ಪ್ರೀತಿ!! ಪ್ರತಿದಿನವೂ ಕೂಟು ಇರುತ್ತಿದ್ದು ಅದೇ ದಿನವೇ ಮೇಲ್ವಿಚಾರಕರ ಅಸಡ್ಡೆಯಿಂದಲೊ, ದಿನವೂ ಕೂಟು ತಿಂದ ಬೇಸರದಿಂದಲೊ ಅದನ್ನು ಮಾಡಿಸಿರಲಿಲ್ಲ. "ಇನ್ನು ಮುಂದೆ ಏನು ಇರಲಿ, ಇಲ್ಲದಿರಲಿ, ದಿನವೂ ತಪ್ಪದೆ ಕೂಟು ಮಾಡಿಸಬೇಕೆಂದು" ಕಟ್ಟಳೆಯಾಯಿತು.

ಮಧ್ಯಾಹ್ನ ಮೂರು ಘಂಟೆ. ಟೈಪಿಸ್ಟ್ ಸುಬ್ಬಯ್ಯನವರು ಒಂದೇ ಸಮನೆ ಕಾಗದಗಳನ್ನು ಟೈಪ್ ಮಾಡುತ್ತಿದ್ದರು. ಮೇಜಿನ ಮೇಲೆ ಪಕ್ಕದಲ್ಲಿ ಲೋಹದ ವಿದ್ಯುದ್ಬೀಸಣಿಗೆ (ಅರಿಸಮಾಸವಾದರೂ ಚಿಂತೆಯಿಲ್ಲ) ರಭಸದಿಂದ ತಿರುಗುತ್ತಿತ್ತು. ರಾಜಾಜಿಯವರು ಚೇಷ್ಟೆ ಮಾಡುವ ಮಕ್ಕಳಂತೆ ಅದರ ಗುಂಡಿಯನ್ನು ತಿರುಗಿಸುತ್ತ, ಬೀಸಣಿಗೆಯನ್ನು ನಿಲ್ಲಿಸುತ್ತ ನಡಸುತ್ತ ಆಟವಾಡುತ್ತಿದ್ದರು. ಹತ್ತು ನಿಮಿಷಗಳಾದ ಮೇಲೆ ಬೀಸಣಿಗೆಯನ್ನು ಬಿರುಸಾಗಿ ತಿರುಗಿಸಿ ಇದ್ದಕ್ಕಿದ್ದ ಹಾಗೆ ಅಲ್ಲಿದ್ದವರ ಮುಂದೆ ಒಂದು ಪಂಥ ಹೂಡಿದರು. ತಿರುಗುತ್ತಿರುವ ಲೋಹದ ಅಲಗಿನ ಬೀಸಣಿಗೆಯನ್ನು ಬರಿಯ ಅಂಗೈಯಿಂದ ತಡೆದು ಯಾರು ನಿಲ್ಲಿಸುತ್ತಾರೆಂಬುದೇ ಆ ಪಂಥ. ಯಾರೊಬ್ಬರೂ ಸಿದ್ಧವಾಗಿರಲಿಲ್ಲ. ಅಷ್ಟೇ ಅಲ್ಲ, ತಾವು ಪ್ರಯತ್ನಿಸುವುದಾಗಿ ಮುನ್ನುಗ್ಗಿದ ರಾಜಾಜಿಯವರನ್ನೂ ಎಲ್ಲರೂ ಬೇಡವೆಂದು ಕೇಳಿಕೊಂಡರು. ಪಟ್ಟಿನ ರಾಜಾಜಿ ಕೇಳುತ್ತಾರೆಯೇ? ಎರಡನೆಯ ಪ್ರಯತ್ನದಲ್ಲಿಯೇ ಜಯಶೀಲರಾಗಿ ಬೀಸಣಿಗೆಯನ್ನು ತಡೆದು ನಿಲ್ಲಿಸಿ ಚಕ್ರಾಯುಧವನ್ನು ತಡೆದ ವೀರನಂತೆ ಕಂಗೊಳಿಸಿದರು. ಆಗ ತಿಳಿಯಿತು, ಅವರ ಹತ್ತು ನಿಮಿಷದ ಹುಡುಗಾಟದ ಗುಟ್ಟು. ಅಲಗು ಯಾವ ದಿಕ್ಕಿನಲ್ಲಿದೆ. ಚಲನೆ ಯಾವ ಮುಖವಾಗಿದೆ, ಎತ್ತಕಡೆಯಿಂದ ಯಾವ ಓರೆಯಲ್ಲಿ ತಡೆಯನ್ನು ಒಡ್ಡಿದರೆ ಕೈಗೆ ಅಪಾಯವಿಲ್ಲ ಎನ್ನುವದನ್ನು

ಅಂದಾಜು ಹಾಕಿ ಗುಣಿಸುವದಕ್ಕಾಗಿ ಅವರು ಜೀಸಣಿಗೆಯನ್ನು ನಿಲ್ಲಿಸುತ್ತ, ನಡಸುತ್ತ ಪ್ರಯೋಗ ನಡಸಿದ್ದರು.

ಸಂಜೆ ಗಾಂಧಿಜೀಯವರು ತಿರುಗಾಟಕ್ಕೆ ಮೊದಲೊ, ತಿರುಗಾಟ ಆದ ಮೇಲೊ—ಈಗ ನೆನಪಿಲ್ಲ—ಪ್ರಾಸಂಗಿಕವಾಗಿ ಬೀಡಾರದ ಮೇಲ್ವಿಚಾರಕರನ್ನು ಕರಸಿ ತೆರವು ಪಟ್ಟಿಯ ವಿವರಗಳನ್ನು ತಿಳಿಯಬಯಸಿದರು. ಗ್ರಹಚಾರವಶದಿಂದ ಆ ದಿಸದ ಪಟ್ಟಿಯಲ್ಲಿ ಮೊದಲನೆಯ ಅಂಶವಾಗಿ 'ಅಗಸರವಸಿಗೆ' ಎಂದು ಮೂವತ್ತೊ ನಲವತ್ತೊ ರೂಪಾಯಿಗಳ ದೊಡ್ಡ ಮೊತ್ತ ಇರಬೇಕೇ? ಅದನ್ನು ಕೇಳಿದೊಡನೆ ಗಾಂಧಿಯವರು ಬೆಚ್ಚಿಬಿದ್ದು ತಿರುಗಿಸುತ್ತಿದ್ದ ರಾಟೆಯನ್ನು ಹಾಗೆಯೇ ನಿಲ್ಲಿಸಿ, ಕತ್ತನ್ನೆತ್ತಿ, ಮೇಲ್ವಿಚಾರಕರನ್ನು ನೋಡಿ, "ಏನದು?" ಎಂದು ಕೇಳಿದರು. ಆತ 'ಏನೊ ಬಂತು ಗ್ರಹಚಾರ' ಎಂದು ಭಯದಿಂದಲೇ "ಬೀಡಾರದಲ್ಲಿ ಇರುವ, ಹೋಗಿಬರುವ ಮಂದಿ ಹೆಚ್ಚು. ಅಲ್ಲದೆ ಎರಡು ಮೂರು ದಿನಗಳ ಬಟ್ಟೆ ಇದ್ದುವು" ಎಂದು ಕ್ಷಮಾಯಾಚನಾ ದೃಷ್ಟಿಯಿಂದ, ದೈನ್ಯಕಂಠದಲ್ಲಿ ಅರಿಕೆಮಾಡಿದರು. ಬಾದನ್ನೂ ಕಿವಿಗೆ ಹಾಕಿಕೊಳ್ಳದೆ, ಪಟ್ಟಿಯ ಮುಂದಿನ ಅಂಶಗಳನ್ನೂ ಓದಗೊಡದೆ ಅಲ್ಲಿಗೇ ನಿಲ್ಲಿಸಿ, ಎಲ್ಲರನ್ನೂ ತಮ್ಮಲ್ಲಿಗೆ ಕರಸಿಕೊಂಡು ಅವರವರ ಮಟ್ಟಕ್ಕೆ, ನಲಿಗೆಗೆ ತಕ್ಕ ರೀತಿಯಲ್ಲಿ ಒಬ್ಬೊಬ್ಬರನ್ನೂ ತರಾಟೆಗೆ ತೆಗೆದುಕೊಂಡರು. ಪ್ರಥಮ ಕೃಪಾಕಟಾಕ್ಷ ಅಗ್ರಪೂಜಾರಿಯ ಮೇಲೆ ಬಿತ್ತು. ಮಹದೇವ ದೇಸಾಯಿಯವರನ್ನು "ನೀನೇಕೆ ನಿನ್ನ ಬಟ್ಟೆಯನ್ನು ಒಗೆದುಕೊಳ್ಳುವದಿಲ್ಲ?" ಎಂದು ಕೇಳಿದರು. ಪಾಪ! ಅವರು ತಲೆ ತಗ್ಗಿಸಿಕೊಂಡು "ಹೊತ್ತಿಲ್ಲ" ಎಂದರು. "ಎಷ್ಟು ಹೊತ್ತಿಗೆ ಏಳುತ್ತೀಯೇ?" ಎಂಬ ಪ್ರಶ್ನೆಗೆ "ಬೆಳಗಿನ ಜಾವ ನಾಲ್ಕು ಘಂಟೆಗೆ" ಎಂದು ಉತ್ತರ. ಇನ್ನೊಂದು ಪ್ರಶ್ನೆಗೆ "ಮಲಗುವದು ರಾತ್ರಿ ಹನ್ನೊಂದೊ, ಹನ್ನೆರಡೊ" ಎಂದು ಉತ್ತರ. ನಡುವೆ ಒಂದು ನಿಮಿಷವೂ ಬಿಡುವಿಲ್ಲವೆಂದು ಕಾರ್ಯದ ವಿವರವನ್ನೆಲ್ಲ ವಿಸ್ತರಿಸಿದ್ದಾಯಿತು. ಇಷ್ಟಾದರೂ ಆ ಮುದುಕನ ಮನಸ್ಸು ಕರಗಿತೆ, ಮರುಗಿತೆ? ಗಂಭೀರವಾಣಿಯಲ್ಲಿ ಬೆಳಗಿನ ಜಾವ ಮೂರೂವರೆ ಘಂಟೆಗೆ ಎದ್ದು ಬಟ್ಟೆಗಳನ್ನು ಒಗೆದು ತರುವಾಯ ನಾಲ್ಕು ಘಂಟೆಯಿಂದ ದಿನದ ಕೆಲಸಕ್ಕೆ ತೊಡಗಬೇಕೆಂದು ಸುಲಭ ಕಠೋರ ಆಜ್ಞೆಯಾಯಿತು ಮಹದೇವರಿಗೆ. ಈ ವಿಚಾರಣೆಯ ಪ್ರಸಂಗ ಮೇಲೆ ನಡೆಯುತ್ತಿದ್ದಾಗ, ಕೆಳಗೆ ನಮ್ಮ ಸೇವಾದಲದ ಕೋಣೆಯಲ್ಲಿ ಮತ್ತೊಂದು ಪ್ರಸಂಗ ನಡೆದಿತ್ತು. ಒಬ್ಬೊಬ್ಬರೂ ಅವರವರ ಅಂದಿನ ಕೆಲಸದ ವಿವರವನ್ನು ಒಪ್ಪಿಸುತ್ತಿದ್ದಾಗ ನನ್ನ ಸರದಿ

ಬಂತು. ಆಗ ನಾನು ಮಾಡಿದ ಕೆಲಸಗಳಲ್ಲಿ ಒಂದಾಗಿ ಗಾಂಧಿಯವರ ಬಟ್ಟೆಗಳನ್ನೂ ಕಸ್ತೂರಿಬಾಯಿ, ಮೀರಾಬೆನ್‌ರ ಸೀರೆ, ಲಂಗ, ಕುಪ್ಪಸಗಳನ್ನೂ ಒಗೆದು ಹಾಕಿದ ಅಂಶವನ್ನು ತಿಳಿಸಿದೆ. ಸೇವಕರೆಲ್ಲರೂ ಜೆಬ್ಬೆರಗಾಗಿ "ನಿನಗೇನು ಬಂತು ಹೊತ್ತು, ಗಂಡಸು ಹೆಂಗಸಿನ ಬಟ್ಟೆ ಒಗೆಯುವುದೇ ?" ಎಂದರು. ಅಷ್ಟೇ ಅಲ್ಲ, ನನ್ನ ತಪ್ಪಿಗಾಗಿ ತಾವು ನಾಚಿದಂತ ತಲೆ ತಗ್ಗಿಸಿಕೊಂಡರು. ಮನೆಯಲ್ಲಿ ಸಂದರ್ಭ ಬಿದ್ದಾಗ ಹೆಣ್ಣುಮಕ್ಕಳ ಸೀರೆಯನ್ನು ಒಗೆದುಹಾಕಿ ಅದರಲ್ಲಿ ಯಾವ ವಿಶೇಷವನ್ನೂ ವೈಚಿತ್ರ್ಯವನ್ನೂ ಕಾಣದ ನನಗೆ ಸೇವಾ ಕಂಕಣಬದ್ಧರಾಗಿ ನಿಂತಿದ್ದ ನನ್ನ ಕೆಳೆಯರ ಈ ಬೆರಗು ನಾಚಿಕೆಗಳು ಅರ್ಥವಾಗಲಿಲ್ಲ. ರಹಸ್ಯವಿಷ್ಟೆ-ಮಹಾತ್ಮಜೀಯವರ ಪ್ರಕಾಶ ಸೇವೆಗೆ ನಾವೆಲ್ಲರೂ ಸಿದ್ಧ, ಹೆಮ್ಮೆಯ ಸ್ವಾರ್ಥಕ್ಕಾಗಿ. ಆದರೆ ಬಾಹ್ಯ ಪ್ರದರ್ಶನಾಡಂಬರಕ್ಕೆ ಅವಕಾಶವಿಲ್ಲದ ಗುಪ್ತ ಸೇವೆಗೆ ತೊಡಗುವವರು ವಿರಳ.

ರಾತ್ರಿ ಸುಮಾರು ಒಂಬತ್ತು ಘಂಟೆಯಾಗಿದೆ. ಎಲ್ಲರೂ ಅವರವರ ಕೋಣೆಗಳಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಾರೆ. ಮೇಲುಗಡೆ ಗಾಂಧಿಯವರು ಹಾಸಿಗೆಯಲ್ಲಿ ದೇಹಸೀಡಿ ಬಿಡುವುಗೊಂಡಿದ್ದಾರೆ. ಮೀರಾಬೆನ್ ಅವರು ಎಣ್ಣೆ ನವರಿ ನೀವುತ್ತ, ಹಲವು ವಿಷಯಗಳನ್ನು ಚರ್ಚಿಸುತ್ತ ಉಪದೇಶಗೊಳ್ಳುತ್ತಿದ್ದಾರೆ. ಮಾಲವೀಯಜೀಯವರಿಗೆ ಕರೆಬಂತು ಮೇಲಿನಿಂದ, ಆಪ್ತಾಲೋಚನೆಗಾಗಿ. ಮೀರಾಬೆನ್ ತಮ್ಮ ಕೆಲಸವಾಯಿತೆಂದು ತಮ್ಮ ಕೋಣೆಗೆ ತೆರಳಿದರು. ಗಾಂಧಿಯವರೂ ಮಾಲವೀಯರವರೂ ಕಟ್ಟೇಕಾಂತದಲ್ಲಿ ಆಪ್ತಾಲೋಚನೆ ನಡಸುತ್ತಿದ್ದಾರೆ—ವಿಷಯ ಆಧ್ಯಾತ್ಮಿಕವೋ ಧಾರ್ಮಿಕವೋ ರಾಜಕೀಯವೋ ಆರ್ಥಿಕವೋ, ಸಾಮಾಜಿಕವೋ ವೈಯಕ್ತಿಕವೋ ಯಾರು ಬಲ್ಲರು ? ಗಾಂಧಿಯವರಿಗೆ ಮಾಲವೀಯರವರನ್ನು ಕಂಡರೆ ಹಿರಿಯಣ್ಣನಲ್ಲಿಯಂತೆ ಗೌರವ, ಪೂಜ್ಯತೆ. ಮಾಲವೀಯರವರಿಗೆ ಗಾಂಧಿಯವರನ್ನು ಕಂಡರೆ ಗುರುವಿನಲ್ಲಿಯಂತೆ ಭಕ್ತಿ. ಈ ಹಿರಿಯರಿಬ್ಬರ ಪರಸ್ಪರ ಪ್ರೇಮಾದರಗಳನ್ನೂ, ಗೌರವ ಪೂಜ್ಯತೆಗಳನ್ನೂ ನೋಡಿ ಗ್ರಹಿಸಬೇಕೇ ಹೊರತು ಕೇಳಿ ತಿಳಿಯಲಾಗದು. ಮೇಲೆ ಇವರ ಏಕಾಂತ ನಡೆಯುತ್ತಿದೆ. ಕೆಳಗೆ ಮುಂಗೋಣೆಯಲ್ಲಿ ಐದಾರು ಮಂದಿ ಬಿಡುವಾಗಿ ಆ ಮಾತು, ಈ ಮಾತು ಆಡುತ್ತಾ ಕೂತಿದ್ದೇವೆ—ರಾಜಾಜಿಯವರು, ಮಹದೇವಭಾಯಿಯವರು, ಕಸ್ತೂರಿಬಾಯಿಯವರು, ರಾಜಾಜಿಯ ಮಗಳು ಲಕ್ಷ್ಮಿ, ಸೇವಾದಲದ ಒಬ್ಬಿಬ್ಬರು ಸೇವಕರು. ಆ ಹೊತ್ತಿಗೆ ಸರಿಯಾಗಿ ಮೇಲಿಂದ ಇಳಿದು ತಮ್ಮ ಕೋಣೆಗೆ ಹೋಗಲಿದ್ದ ಮಾಲವೀಯರವರು ಹಾಗೆಯೇ ನಾವಿದ್ದಲ್ಲಿಗೆ ಬಂದು ಕೂತರು.

ಮಾತಿಂದ ಮಾತಿಗೆ ತೊಡಗಿ, ಭಾಷೆಗಳ ವಿಷಯ ಪ್ರಸ್ತಾಪಕ್ಕೆ ಬಂದು ಮಾಲವೀಯರವರು "ಪ್ರತಿಯೊಬ್ಬ ಭಾರತೀಯನೂ ಯಾವದೇ ಜಾತಿಯವನಾಗಲಿ, ಕುಲದವನಾಗಲಿ, ಒಂದು ಕನಿಷ್ಟ ಪ್ರಮಾಣದ ಸಂಸ್ಕೃತವನ್ನು ಕಲಿತಿರಲೇ ಬೇಕು. ಈ ಉದ್ದೇಶದಿಂದ ಜಟಿಲ ಸಂಸ್ಕೃತವನ್ನು ಸರಳವೂ ಸುಲಭವೂ ಮಾಡಿ ಅದರ ಪ್ರಸಾರ ವ್ಯಾಪಕತೆಗಳಿಗೆ ಸಕಲಾನುಕೂಲಗಳನ್ನೂ ಕಲ್ಪಿಸಿ ಕೊಡಬೇಕಾದ್ದು ಪಂಡಿತರ ಕರ್ತವ್ಯ." ಎಂಬ ವಿಚಾರವನ್ನು ಉತ್ಸಾಹ ಶ್ರದ್ಧೆಗಳಿಂದ ಪ್ರಸ್ತಾಪಿಸುತ್ತಿದ್ದರು. ಆಗ ಮಾವಿನ ಹಣ್ಣಿನ ಕಾಲ. ರಾಜಾಜಿಯವರಿಗೆ ಮಾವಿನ ಹಣ್ಣೆಂದರೆ ಪ್ರಾಣ! ಮಾತಿನ ನಡುವೆ "ಜೇಡಾರದಲ್ಲಿ ಮಾವಿನ ಹಣ್ಣು ಇಲ್ಲವೇ?" ಎಂದು ಕೇಳಿದರು. ಒಡನೆಯೇ ಒಳಗೆ ಹೋಗಿ ಹತ್ತು-ಹನ್ನೆರಡು ಹಣ್ಣುಗಳನ್ನು ತಂದು, ಸಿಪ್ಪೆಗಳನ್ನು ತೆಗೆದುಕೊಟ್ಟದ್ದಾಯಿತು. ಎಲ್ಲರೂ ತಿನ್ನುತ್ತಿದ್ದಾರೆ. ಕಸ್ತೂರಿಬಾಯಿಯವರು ಸುಮ್ಮನೆ ಕುಳಿತಿದ್ದರು. ಮಹದೇವಭಾಯಿಯವರು ಒಂದು ಹೋಳನ್ನು ಅವರಿಗೆ ಕೊಡಹೋದರು. ಅವರು "ಒಲ್ಲೆ" ಎನ್ನಲು ತಾವೇ ಬಾಯಿಗೆ ಹಾಕಿಕೊಂಡರು. ಮತ್ತೆ ಮೂರು ನಾಲ್ಕು ಹೋಳುಗಳನ್ನು ತಿಂದು, ಮಹದೇವರಿಗೆ ಏನೆನ್ನಿಸಿತೋ, ಇನ್ನೊಮ್ಮೆ ಒಂದು ಹೋಳನ್ನು ತೆಗೆದು, ಈ ಸಲ 'ಬಾ' ಅವರ ಬಾಯ ಹತ್ತಿರ ಹಿಡಿದು ತಿನ್ನುವಂತೆ ಒತ್ತಾಯಪಡಿಸಿದರು. ಆಗಲೂ 'ಬಾ' "ಒಲ್ಲೆ" ಎಂದು ಹೇಳಿ ತಾವೇ ಕಾರಣವನ್ನು ಕೊಡುತ್ತ, ತಮ್ಮದೇ ಆದ ಮುರುಕು ಇಂಗ್ಲಿಷಿನಲ್ಲಿ "In morning I eat one mango, and all day it is mango" ಎಂದು ತಮ್ಮ ಕೈಯನ್ನು ಗಂಟಲಿಂದ ಎದೆಯವರೆಗೆ ಆಡಿಸುತ್ತ ಹೇಳಿದರು. ಎಲ್ಲರಿಗೂ ಅದರ ಅರ್ಥ ಸ್ಪಷ್ಟವಾಯಿತು. ಆದರೂ ಆ ವಿಚಿತ್ರ ಇಂಗ್ಲಿಷ್ ವಾಕ್ಯವನ್ನು ಕೇಳಿದೊಡನೆ ಇಂಗ್ಲಿಷ್ ಪ್ರವೀಣರೆಂದು ಭ್ರಮೆಗೊಂಡಿದ್ದ ನಾವೆಲ್ಲರೂ ಬಿದ್ದು ಬಿದ್ದು ನಕ್ಕೆವು. ಐದು ನಿಮಿಷಗಳಾಗಿ ಮೈ ಮನಸ್ಸುಗಳು ಸ್ತಿಮಿತಕ್ಕೆ ಬಂದಾಗ ಅಸಾಧ್ಯಗಿರಾಕಿಯಾದ ರಾಜಾಜಿಯವರು ನಮ್ಮ ಮುಂದೆ ಒಂದು ಪಂಥ ಒಡ್ಡಿದರು. "ಇಂಗ್ಲಿಷ್ ಕಲಿಯದ 'ಬಾ' ಅವರ ಮಾತನ್ನು ಕೇಳಿ ನಕ್ಕದ್ದಾಯಿತು. ಈಗ ಇಂಗ್ಲಿಷ್ ಕಲಿತು ಪದವೀಧರರಾದ ನಮ್ಮ ಸಾಮರ್ಥ್ಯವನ್ನು ನೋಡೋಣ. ಆಕೆಯ ಅಭಿಪ್ರಾಯವನ್ನು ವ್ಯಾಕರಣಬದ್ಧ ಇಂಗ್ಲಿಷ್ ಸಹಜೋಕ್ತಿಯಲ್ಲಿ ಅಷ್ಟೇ ಸ್ವಾರಸ್ಯವಾಗಿ ಯಾರು ಹೇಳುತ್ತಾರೆ?" ಎಂಬುದೇ ಆ ಪಂಥ. ಆ ಪಂಥದಲ್ಲಿ ಯಾರೂ ಗೆದ್ದಂತೆ ನನ್ನ ನೆನಪಿಲ್ಲ. "ಬೆಳಗ್ಗೆ ತಿಂದ ಒಂದು ಮಾವಿನ ಹಣ್ಣೇ ಇನ್ನೂ ಎದೆಯಲ್ಲಿ ಒತ್ತುತ್ತಿದೆ" ಎಂಬ ಭಾವವನ್ನು 'ಬಾ' ಅವರು ತಮ್ಮ

ಹರುಕು ಮುರುಕು ಇಂಗ್ಲಿಷ್ ಮಾತಿನಲ್ಲಿ ಕುರಿತೇಟಾಗಿ ಸ್ಪಷ್ಟಪಡಿಸಿದಂತೆ ವ್ಯಾಕರಣಬದ್ಧ ಗಂಭೀರೋಕ್ತಿಯಲ್ಲಿ ಅಷ್ಟೇ ಮೊನಚಾಗಿ ಯಾರು ತಿಳಿಸ ಬಲ್ಲರು?

ಸುಮಾರು ಹತ್ತು ಹೊಡೆದಿರಬಹುದು. ಎಲ್ಲರೂ ಅವರವರ ಕೋಣೆಗೆ ಮಲಗ ಹೋದರು. ಮಹದೇವ ದೇಸಾಯಿಯವರೂ ಅವರ ಕೋಣೆಗೆ ಹೋದರು—ಮಲಗುವದಕ್ಕಲ್ಲ, ದಿನದಲ್ಲಿ ಮಿಕ್ಕುಳಿದ ಪತ್ರ ವ್ಯವಹಾರವನ್ನೂ ಕೆಲಸಗಳನ್ನೂ ಪೂರೈಸುವದಕ್ಕಾಗಿ. ಅವರು ಎಷ್ಟು ಹೊತ್ತು, ಯಾವಾಗ ನಿದ್ರಿಸುತ್ತಿದ್ದರೋ ಭಗವಂತನೇ ಬಲ್ಲ! ಪಾಪ! ಆ ಪ್ರಾಣಿ ಮಲಗಿಕೊಂಡರೂ ನೆಮ್ಮದಿಯುಂಟೆ? ಮಲಗುವ ಮುನ್ನವೇ ಏಳುವ ಚಿಂತೆ.

# ಗಾಂಧೀಯವರ ಶಿಕ್ಷಣ ತತ್ತ್ವಗಳು

**ಕೆ. ಸಂಪದ್ಗಿರಿರಾವ್**

ಗಾಂಧೀಯವರು ಶಿಕ್ಷಣ ಶಾಸ್ತ್ರವೇತ್ತರಲ್ಲ. ಅವರ ಶಿಕ್ಷಣ ತತ್ತ್ವಗಳೆಲ್ಲವೂ ಸ್ವಾನುಭವದಿಂದಲೂ, ಪ್ರತ್ಯಕ್ಷ ಪ್ರಯೋಗದಿಂದಲೂ ಅವರಿಗೆ ತೋರಿ ಬಂದುವು. ಪುಸ್ತಕಗಳ ವ್ಯಾಸಂಗದಿಂದ ಲಭಿಸಿದುವಲ್ಲ. ಅವರೇ ಯಾವ ಪ್ರೌಢ ಶಿಕ್ಷಣವನ್ನೂ ಹೊಂದಿದವರಾಗಿರಲಿಲ್ಲ. ಯಾವ ಶಿಕ್ಷಣ ಪ್ರಶಸ್ತಿಗಳೂ ಅವರ ಪಾಲಿಗೆ ಬಂದಿರಲಿಲ್ಲ. ಹೆಚ್ಚಿನ ವ್ಯಾಸಂಗವನ್ನು ಮಾಡಲು ಅವರಿಗೆ ವ್ಯವಧಾನವೂ ಮನಸ್ಸೂ ಇರಲಿಲ್ಲ.

ಆದರೂ ನಮ್ಮ ರಾಷ್ಟ್ರನಿರ್ಮಾಣಕ್ಕೆ ಅವರು ಹಾಕಿಕೊಟ್ಟಿರುವ ರಚನಾತ್ಮಕ ಕಾರ್ಯಕ್ರಮಗಳ ಪೈಕಿ "ನಯಿತಾಲೀಂ" ಅಥವಾ ನೂತನ ಶಿಕ್ಷಣ ಒಂದು ವಿಶೇಷಸ್ಥಾನವನ್ನು ಪಡೆದಿದೆ. ಅವರು ಸೂಚಿಸಿರುವ ಇತರ ಎಲ್ಲ ಕಾರ್ಯಕ್ರಮಗಳಿಗೂ ಇದು ಮಕುಟಪ್ರಾಯವೆಂದೂ ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಏಕೆಂದರೆ ಇದರ ಮೂಲಕ ಭಾವೀಜನಾಂಗದ ಜೀವನವನ್ನೇ ಉತ್ತಮರೀತಿಯಲ್ಲಿ ರೂಪುಗೊಳಿಸಬಲ್ಲದು. ಈ ಕಾರಣದಿಂದ ಗಾಂಧೀಯವರು ಶಿಕ್ಷಣಕ್ಷೇತ್ರದಲ್ಲಿ ಮಹಾಸುಧಾರಕರ ಶ್ರೇಣಿಗೆ ಸೇರಿದವರಾಗಿದ್ದಾರೆ.

ದಕ್ಷಿಣ ಆಫ್ರಿಕಾದಲ್ಲಿ ೧೯೦೪ ರಲ್ಲಿ ಫೀನಿಕ್ಸ್ ಆಶ್ರಮವನ್ನು ಸ್ಥಾಪಿಸಿದ ಕಾಲದಿಂದಲೂ ಮಕ್ಕಳ ಶಿಕ್ಷಣ ಮತ್ತು ತರಬೇತಿನ ವಿಚಾರದಲ್ಲಿ ಅವರು ವಿಶೇಷವಾದ ಗಮನವನ್ನು ಕೊಡಬೇಕಾಗಿಬಂದಿತು. ತಾವು ಮನಗಂಡ ಜೀವನದ ಧ್ಯೇಯಕ್ಕೆ ಒಂದು ರೂಪವನ್ನು ಕೊಡಲು ಈ ಆಶ್ರಮವು ಪ್ರಯೋಗಶಾಲೆಯಂತೆ ಆಯಿತು. ಅನಂತರ ಅವರು ಸ್ಥಾಪಿಸಿದ ಸಾಬರಮತಿ ಮತ್ತು ಸೇವಾಗ್ರಾಮ ಆಶ್ರಮಗಳಿಗೆ ಇದೇ ಮಾತೃಕೆ ಎಂದು ಹೇಳಬಹುದು. ನಿತ್ಯವೂ ಸಾಮೂಹಿಕ ದೇವತಾಪ್ರಾರ್ಥನೆ, ಧರ್ಮ ಮತ್ತು ನೀತಿಗಳ ನೆಲೆಗಟ್ಟಿನಮೇಲೆ ಜೀವನವು ನಡೆಯಬೇಕೆಂಬ ಆಕಾಂಕ್ಷೆ, ಸರಳತೆ, ಪ್ರತಿಯೊಬ್ಬರೂ ಕಾಯಕಷ್ಟದಿಂದ ಏನಾದರೂ ಉಪಯುಕ್ತವಾದ, ಕೆಲಸ

ವನ್ನು ಮಾಡಬೇಕೆಂಬ ನಿಯಮ, ಜಾತಿಮತಗಳ ಭೇದವನ್ನು ಲೆಕ್ಕಿಸದೆ ಎಲ್ಲ ಧರ್ಮಗಳಿಗೂ ಸಮಾನವಾದ ಗೌರವ—ಈ ವಾತಾವರಣದಲ್ಲಿ ತಮ್ಮ ಕುಟುಂಬಕ್ಕೆ ಸೇರಿದವರೂ, ಪರಿವಾರದವರೂ ಒಂದು ಸಂಯಮಯುತವಾದ ಜೀವನವನ್ನು ಕೈಗೊಂಡರು. ಗಾಂಧೀಯವರು ೧೯೦೮ ರಲ್ಲಿ ಬರೆದ 'ಹಿಂದ್ ಸ್ವರಾಜ್' ಎನ್ನುವ ಪುಸ್ತಕದಲ್ಲಿ ಶಿಕ್ಷಣವನ್ನು ಕುರಿತು ತಮ್ಮ ಅಭಿಪ್ರಾಯ ಗಳನ್ನು ಒಂದು ಸಣ್ಣ ಅಧ್ಯಾಯದಲ್ಲಿ ಸೂಚಿಸಿದ್ದಾರೆ. ಆಗಿನ ಕಾಲಕ್ಕೆ ಇಂಗ್ಲೀಷು ವಿದ್ಯಾಭ್ಯಾಸದಲ್ಲಿ ಜನರಿಗೆ ಬಹಳ ಆದರವಿತ್ತು. ಆದರೆ ಈ ವಿದ್ಯಾ ಭ್ಯಾಸವು ನಮ್ಮಲ್ಲಿ ಸ್ವಾರ್ಥವನ್ನು ಹೆಚ್ಚಿಸಿರುವುದೆಂದೂ, ಈ ಶಿಕ್ಷಣವನ್ನು ಪಡೆದವರು ಇದನ್ನು ಅನೇಕವೇಳೆ ದುರುಪಯೋಗಮಾಡಿರುವರೆಂದೂ, ನಮ್ಮ ಧರ್ಮಗಳ ವಿಷಯದಲ್ಲಿ ವಿದ್ಯಾವಂತರಿಗೆ ಶ್ರದ್ಧೆಯೇ ಇಲ್ಲದಂತೆ ಆಗಿರುವು ದೆಂದೂ, ನಮ್ಮ ದೇಶಭಾಷೆಗಳು ಮೂಲೆಗೆ ಒತ್ತಲ್ಪಟ್ಟಿರುವವೆಂದೂ— ಮುಂತಾದ ಕಟುವಾದ ಟೀಕೆಗಳನ್ನು ಈ ಅಧ್ಯಾಯದಲ್ಲಿ ಗಾಂಧೀಯವರು ಮಾಡಿರುವರು. ದೇಶಭಾಷೆಗಳ ವಿಚಾರದಲ್ಲಿಯೂ, ರಾಷ್ಟ್ರಭಾಷೆಯ ಅವಶ್ಯಕತೆ ಅದರ ಲಿಪಿಯ ವಿಚಾರಗಳಲ್ಲಿ ಗಾಂಧೀಯವರು ಅಷ್ಟು ಪೂರ್ವದಲ್ಲಿಯೇ ಮಾಡಿದ್ದ ಸಿದ್ಧಾಂತಗಳು ಯಾವ ಬದಲಾವಣೆಯೂ ಇಲ್ಲದೆ ಕೊನೆಯವರೆಗೂ ಅವರು ಸಾರುತ್ತಲಿದ್ದರೆಂಬುದು ಗಮನಾರ್ಹ ವಿಷಯವಾಗಿದೆ.

ಮುಖ್ಯವಾಗಿ ಈಗಿನ ಕಾಲದ ಶಿಕ್ಷಣ ಕೇವಲ ಮೆದುಳಿನ ವ್ಯಾಯಾಮ— ಮಾನಸಿಕ ವ್ಯವಸಾಯ ಮಾತ್ರ—ಅದರಲ್ಲಿಯೂ ಪರೀಕ್ಷೆಗಳಲ್ಲಿ ಉತ್ತೀರ್ಣ ವಾಗುವುದೇ ಪರಮೋದ್ದೇಶವಾಗಿದೆ. ಮತ್ತು ಈ ಕ್ರಮದಲ್ಲಿ ಕಲಿಯುವ ಅನೇಕ ವಿಷಯಗಳು ಜೀವನಕ್ಕೆ ನಿರರ್ಥಕವೆಂದು ಎಲ್ಲರ ಅನುಭವಕ್ಕೂ ಬಂದ ವಿಷಯ. ಸಾರ್ಥಕತೆ ದೃಷ್ಟಿಯಿಂದಲೂ, ಪ್ರತ್ಯಕ್ಷ ಅನುಭವ ಮತ್ತು ಪ್ರಯೋಗಗಳ ಮೂಲಕ ನಾವು ಯಾವುದನ್ನು ಕಲಿಯುವೆವೋ ಆ ಅಂಶಗಳೇ ನಮ್ಮ ವಿಕಾಸಕ್ಕೆ ಕಾರಣವಾಗುತ್ತವೆಂದು ಎಲ್ಲ ಶಿಕ್ಷಣ ಶಾಸ್ತ್ರಜ್ಞರೂ ಒಪ್ಪಿರುವ ಮಾತು. ಈ ತತ್ವವನ್ನನುಸರಿಸಿಯೇ ಗಾಂಧಿ ಯವರೂ ಸಹ ತಮ್ಮ ಶಿಕ್ಷಣ ಸುಧಾರಣೆಗಳನ್ನು ಸೂಚಿಸಿದರು.

ಆರಂಭದಲ್ಲಿ ಸಣ್ಣ ಮಕ್ಕಳು ಶುಚಿತ್ವವನ್ನು—ಅಂದರೆ ತಮ್ಮ ಕೈ ಕಾಲು, ಮೈ, ಮುಖ, ಹಲ್ಲು ಇವುಗಳನ್ನೂ, ತಮ್ಮ ಬಟ್ಟೆಬರೆಗಳನ್ನೂ ನಿರ್ಮಲ ವಾಗಿಟ್ಟುಕೊಳ್ಳಲು ಕಲಿಯುವುದೇ ಅವರ ನಿಜವಾದ ಶಿಕ್ಷಣದ ಮೂಲ ಪಾಠಗಳೆಂದು ಗಾಂಧಿಯವರ ಅಭಿಪ್ರಾಯ. ಅನಂತರ ಕಿವಿಗಳಿಂದ ಕೇಳುವುದು, ವಿಷಯಗಳನ್ನು ಗ್ರಹಿಸುವುದೂ, ಆಟಪಾಟಗಳು—ಇವುಗಳ ಮುಖಾಂತರ

ಮಕ್ಕಳ ಬುದ್ಧಿ ಕ್ರಮವಾಗಿ ವಿಕಾಸಗೊಳ್ಳಬೇಕು. ಅನಂತರವೇ ಓದುವುದು—ಆದಾದಮೇಲೆ ಬರೆವಣಿಗೆ ಈ ಕ್ರಮದಲ್ಲಿ ಮಕ್ಕಳು ಅಭ್ಯಾಸಮಾಡಬೇಕು.

ಕೈಕೆಲಸವನ್ನು ಪ್ರತಿಯೊಬ್ಬರೂ ಅಭ್ಯಾಸಮಾಡಿ, ಅದರಲ್ಲಿ ಕುಶಲತೆಯನ್ನೂ ಸಂತೋಷವನ್ನೂ, ಪ್ರಯೋಜನವನ್ನೂ ಪಡೆಯುವುದು ಒಂದು ವ್ಯಕ್ತಿಯ ಸಮಗ್ರ ಶಿಕ್ಷಣಕ್ಕೆ ಹೇತುವಾಗುವುದೆಂದು ಗಾಂಧೀಯವರ ಮತ. ಇದೇ ಅವರ ಶಿಕ್ಷಣತತ್ತ್ವದ ವೈಶಿಷ್ಟ್ಯ. ಯಾರೇ ಆಗಲೀ ಒಂದಲ್ಲ ಒಂದು ರೀತಿಯಲ್ಲಿ ಕಾಯಕಷ್ಟವಿಲ್ಲದೆ ಈ ಪ್ರಪಂಚದಲ್ಲಿ ಬೆಳೆಯುವ ಆಹಾರವನ್ನು ತೆಗೆದು ಕೊಳ್ಳುವ ಅರ್ಹತೆಯನ್ನು ಹೊಂದಲಾರರೆಂದು ಗಾಂಧೀಯವರ ಸಿದ್ಧಾಂತ. ತಾವು ಸ್ವತಃ ಈ ಸಿದ್ಧಾಂತಕ್ಕನುಸಾರವಾಗಿ ನೂಲುವ ಕರ್ಮವನ್ನು ಬಹು ನಿಷ್ಠೆಯಿಂದ ಆಚರಿಸುತ್ತಿದ್ದ ವಿಷಯ ಎಲ್ಲರಿಗೂ ತಿಳಿದದ್ದೇ ಆಗಿದೆ.

೧೯೨೧ ರಲ್ಲಿ ಅಸಹಕಾರ ಚಳುವಳಿ ಪ್ರಾರಂಭವಾದಾಗ ಸರಕಾರೀ ಶಾಲಾ ಕಾಲೇಜುಗಳನ್ನು ತ್ಯಜಿಸಬೇಕೆಂದು ಕಾಂಗ್ರೆಸ್ಸು ಸಂದೇಶವಿತ್ತಿತು. ಆ ಕಾಲಕ್ಕೆ ಅನೇಕ ರಾಷ್ಟ್ರೀಯ ಶಾಲೆಗಳೂ ಸಂಸ್ಥೆಗಳೂ ಸ್ಥಾಪಿತವಾದವು. ಇವುಗಳಲ್ಲಿ ನೂಲುವ ಕೆಲಸಕ್ಕೆ ವಿಶೇಷ ಗಮನವನ್ನು ಕೊಡಲಾಗಿತ್ತು. ಆದರೆ ಉಳಿದ ವಿಚಾರಗಳಲ್ಲಿ ಇತರ ಶಾಲೆಗಳಲ್ಲಿದ್ದಂತೆಯೇ ಪಾಠ ಪ್ರವಚನ ಗಳಾಗುತ್ತಿದ್ದುವು. ಅನೇಕ ಶಾಲೆಗಳನ್ನು ಕಾಲಕ್ರಮದಲ್ಲಿ ಮುಚ್ಚಬೇಕಾ ಯಿತು. ಗಾಂಧೀಯವರು ಈ ಸ್ವತಂತ್ರ ರಾಷ್ಟ್ರೀಯ ಶಾಲೆಗಳಲ್ಲಿ ವಿಶ್ವಾಸ ವುಳ್ಳವರಾಗಿದ್ದರೂ ಸಹ ಅವುಗಳ ಸುಧಾರಣೆ, ಭದ್ರತೆಗಳ ಕಡೆ ಅವರು ಹೆಚ್ಚು ಗಮನವನ್ನು ಕೊಡಲು ಸಾಧ್ಯವಾಗಲಿಲ್ಲ.

ಅನಂತರ ೧೯೩೭ ರಲ್ಲಿ ನಮ್ಮ ದೇಶದ ಏಳು ಪ್ರಾಂತಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ಸ್ಥಾಪಿತವಾದಾಗ ದೇಶಾದ್ಯಂತ ಪ್ರಾಥಮಿಕ ವಿದ್ಯಾ ಭ್ಯಾಸವನ್ನು ಒತ್ತಾಯವಾಗಿಯೂ ಉಚಿತವಾಗಿಯೂ ಒದಗಿಸಬೇಕೆಂಬ ಆಶಯ ಎಲ್ಲ ಮಂತ್ರಿಮಂಡಲಗಳದ್ದೂ ಆಗಿತ್ತು. ಆದರೆ ಇದಕ್ಕೆ ತಗಲುವ ಖರ್ಚು ಅಪಾರವಾದುದು. ಈ ಖರ್ಚನ್ನು ಒದಗಿಸುವುದು ಹೇಗೆ? ಮತ್ತು ನಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ರಾಷ್ಟ್ರೀಯ ಧ್ಯೇಯದಿಂದ ಕೂಡಿ ದ್ದಾಗಿರಲು ಅದನ್ನು ಹೇಗೆ ರೂಪುಗೊಳಿಸಬೇಕು? ಈ ಸಮಸ್ಯೆಗಳನ್ನು ಗಾಂಧೀಯವರು ಪರಿಹಾರ ಮಾಡಬೇಕಾಗಿದ್ದಿತ್ತು. ಅವರ ಸಲಹೆಯ ಮೇರೆಗೆ ವಾರ್ಧಾ ನಗರದಲ್ಲಿ ಅಕ್ಟೋಬರ್, ೧೯೩೭ ರಲ್ಲಿ ಒಂದು ಶಿಕ್ಷಣ ಸಮ್ಮೇಳನ ವನ್ನು ಕರೆಯಲಾಯಿತು. ಈ ಸಮ್ಮೇಳನಕ್ಕೆ ಎಲ್ಲ ಪ್ರಾಂತಗಳಿಂದಲೂ ಪ್ರತಿ ನಿಧಿಗಳು ಬಂದಿದ್ದರು. ನುರಿತ ಶಿಕ್ಷಣ ಶಾಸ್ತ್ರಜ್ಞರಿದ್ದರೂ ಈ ಸಮ್ಮೇಳನ

ದಲ್ಲಿಯೇ ಈಗ ನಯೀತಾಲೀಂ ಎಂದು ಪ್ರಸಿದ್ಧಿಗೆ ಬಂದಿರುವ ಯೋಜನೆಯು ಜನ್ಮತಾಳಿತು.

ಈ ಯೋಜನೆಯ ಪ್ರಕಾರ ಪ್ರಾಥಮಿಕ ಶಿಕ್ಷಣ ಕ್ರಮದಲ್ಲಿ ಒಂದು ಉಪಯುಕ್ತವಾದ ಕೈಕಸಬು—ಅದಕ್ಕೆ ಸಂಬಂಧಿಸಿದ ವಸ್ತುಗಳ ಪರಿಜ್ಞಾನ ಇದೇ ಶಿಕ್ಷಣದ ಮೂಲಬಂದುವಾಗಿರಬೇಕು. ಹೀಗೆ ಕಲಿಯುವ ಸಂದರ್ಭ ದಲ್ಲಿ ಪ್ರಾಸಂಗಿಕವಾಗಿಯೂ ಅನುಬಂಧರೂಪದಲ್ಲಿಯೂ, ಭಾಷೆ, ಭೂಗೋಳ, ಚರಿತ್ರೆ, ವಿಜ್ಞಾನ, ಮುಂತಾದ ಸಾಮಾನ್ಯ ಜ್ಞಾನದ ವಿಷಯಗಳನ್ನು ಬೋಧಿಸಬೇಕು. ಶಾಲೆಯನ್ನು ನಡೆಸುವ ವೆಚ್ಚ—ಅಂದರೆ ವಿಶೇಷತಃ ಅಧ್ಯಾಪಕರ ವೇತನಶಾಲೆಯಲ್ಲಿ ಸಿದ್ಧವಾಗುವ ಪದಾರ್ಥಗಳ ಮಾರಾಟದಿಂದ ಪೂರೈಸಿಕೊಳ್ಳಬಹುದೆಂದು ಆಶಿಸಲಾಗಿತ್ತು. ಈ ವರಮಾನದ ವಿಷಯವನ್ನು ಈರೀತಿಯಲ್ಲಿ ಜೋಡಿಸಿರುವುದಕ್ಕಾಗಿ ಅನೇಕರು ಈ ಯೋಜನೆಯ ವಿಚಾರ ದಲ್ಲಿ ಅಸಂತುಷ್ಟಿಯನ್ನು ವ್ಯಕ್ತಪಡಿಸಿರುವರು. ಗಾಂಧೀಯವರು ಸಹ ಈ ಯೋಜನೆಯ ಶಿಕ್ಷಣದ ಅಂಶಕ್ಕೆ ಹೆಚ್ಚು ಮನ್ನಣೆಯನ್ನು ಕೊಡುವವ ರಾದರೂ ಈ ಶಾಲೆಗಳಲ್ಲಿ ಕೈಕೆಲಸವು ತೃಪ್ತಿಕರವಾಗಿ ನಡೆದಪಕ್ಷಕ್ಕೆ ಶಾಲೆಗಳ ವೆಚ್ಚದ ಬಹುಭಾಗವು ಹುಟ್ಟಲೇಬೇಕೆಂದು ಹೇಳುತ್ತಿದ್ದರು. ಈ ಶಾಲೆಗಳಲ್ಲಿ ದಕ್ಷತೆಯಿಂದ ಕೆಲಸ ನಡೆಯುತ್ತಿರುವುದಕ್ಕೆ ಇದೊಂದು ಪ್ರಮಾಣವಾಗು ವುದೆಂದು ಅವರ ಅಭಿಪ್ರಾಯ.

ಈ ಶಾಲೆಗಳಲ್ಲಿ ಶಿಕ್ಷಣಹೊಂದಿದ ವಿದ್ಯಾರ್ಥಿ ವಿದ್ಯಾರ್ಥಿನಿಯರು ತಮ್ಮ ಹಳ್ಳಿಯವರ ಜೀವನದಲ್ಲಿ ಹೆಚ್ಚು ಆಸಕ್ತಿಯಿಂದ ಬೆರತು ಆ ಜೀವನದ ಸುಧಾರಣೆಯನ್ನು ಮಾಡಲು ಸಮರ್ಥರಾಗುವರು. ಶ್ರಮಜೀವನವನ್ನು ನಡೆಸುವ ಅಭ್ಯಾಸವನ್ನು ಪಡೆದಿರುವುದರಿಂದ ಇತರರ ದುಡಿಮೆಯಿಂದ ತಮ್ಮ ಸ್ವಾರ್ಥಸಾಧನೆಯನ್ನು ಮಾಡಿಕೊಳ್ಳುವ ಮನೋವೃತ್ತಿಯನ್ನು ಬಿಡುವವ ರಾಗುವರು. ಇಂತಹ ಮನೋವೃತ್ತಿಯೇ ಆಧುನಿಕ ನಾಗರಿಕ ಜೀವನದ ಪ್ರಬಲವಾದ ದೋಷವಾಗಿದೆ. ಈ ಕಾರಣದಿಂದ ಸಮಾಜದಲ್ಲಿ ಅಸೂಯೆ, ವಿಷಮರೀತಿಯ ಸ್ಪರ್ಧೆ, ಅಶಾಂತಿ ಬೆಳೆದಿದೆ. ಅಸತ್ಯಕ್ಕೂ, ಹಿಂಸೆಗೂ, ಹೆಚ್ಚು ಆಸ್ಪದ ಉಂಟಾಗಿದೆ. ಆದರೆ ಸಣ್ಣ ವಯಸ್ಸಿನಲ್ಲಿ ಎಲ್ಲರೂ ತಮ್ಮ ಕೈಗಳಿಂದ ಕೆಲಸಮಾಡುವುದು ಗೌರವಹೀನವಲ್ಲವೆಂದು ಮನಗಾಣುವವರಾದರೆ, ಹಳ್ಳಿ ಗಳಲ್ಲಿನ ವ್ಯವಸಾಯ, ಗ್ರಾಮೋದ್ಯೋಗ ಮುಂತಾದ ಕಾರ್ಯಗಳನ್ನು ತಿಳುವಳಿಕೆಯಿಂದ ಅಂದರೆ ಶಾಸ್ತ್ರೀಯವಾದ ರೀತಿಯಲ್ಲಿ ನಡೆಸಲು ಕಲಿತವ ರಾದರೆ ಮತ್ತೆ ನಮ್ಮ ಹಳ್ಳಿಗಳಲ್ಲಿ ತುಷ್ಟಿ ಪುಷ್ಟಿಗಳು ನೆಲೆಗೊಳ್ಳುವವು. ಈ



ಬಾಪೂಜಿ ದಿನಚರಿಯಲ್ಲಿ ಪ್ರಾತಃಕಾಲದ ನಡಿಗೆ ಅತಿ ಮುಖ್ಯ. ಒಂದೆರಡು ಮೈಲಿಗಳ ಕಾಲ್ನಡಿಗೆಯ ವೇಳೆಯಲ್ಲಿ ಮಕ್ಕಳೊಂದಿಗೆ ಅವರು ವಿನೋದವಾಗಿ ಆಟವಾಡುತ್ತಿದ್ದರು. ಸಂಗಡ ಬಂದ ಬಾಲಕವೃಂದವನ್ನೇ ಊರುಗೋಲಾಗಿ ಮಾಡಿಕೊಳ್ಳುತ್ತಿದ್ದುದೂ ಉಂಟು.

ನೂತನ ಶಿಕ್ಷಣಕ್ರಮವು ಸತ್ಯ ಮತ್ತು ಅಹಿಂಸೆಗಳನ್ನು ಸಮಾಜದಲ್ಲಿ ನೆಲೆಗೊಳ್ಳುವಂತೆ ಮಾಡುವುದೆಂದೂ, ಇದರ ಮೂಲಕ ಎಲ್ಲ ಬಗೆಯಲ್ಲಿಯೂ ಗ್ರಾಮಾಭ್ಯುದಯವಾಗುವುದೆಂದೂ ಗಾಂಧೀಯವರ ಭರವಸೆಯಿತ್ತು. ಸ್ವತಃ ತಾವು ಶಿಕ್ಷಣ ಶಾಸ್ತ್ರಸಂಪನ್ನರಾಗಿರಲಿಲ್ಲವೆಂದು ತಿಳಿದಿದ್ದರು—ಆದುದರಿಂದ ತಮ್ಮ ಮೂಲತತ್ವವನ್ನು ಸಂಕೋಚದಿಂದಲೂ ನಮ್ರತೆಯಿಂದಲೂ ಶಿಕ್ಷಣ ಶಾಸ್ತ್ರವೇತ್ತರ ಮುಂದೆ ಅವರಿಟ್ಟರೆಂದು ನಾವು ಕೇಳುತ್ತೇವೆ. ಇದಕ್ಕೆ ಸಂಬಂಧಿಸಿದ ವಿವರಗಳನ್ನೂ ಪಾಠಕ್ರಮಗಳನ್ನೂ ಸಿದ್ಧಗೊಳಿಸಬೇಕೆಂದು ನುರಿತ ಶಿಕ್ಷಣ ವಿದ್ವಾಂಸರನ್ನು ಪ್ರಾರ್ಥಿಸಿಕೊಂಡರು. ೧೯೩೯ ಈ ನೂತನ ಶಿಕ್ಷಣಪ್ರಯೋಗವು ಕೆಲವು ಸ್ಥಳಗಳಲ್ಲಿ ಆರಂಭವಾಯಿತು. ಈ ಪದ್ಧತಿಯು ನಮ್ಮ ಸಮಾಜದಲ್ಲಿ ಒಂದು ಅಹಿಂಸಾತ್ಮಕ ಕ್ರಾಂತಿಯನ್ನೇ ಉಂಟು ಮಾಡಬಹುದೆಂಬ ವಿಶ್ವಾಸ ಗಾಂಧೀಯವರಿಗೆ ಇದ್ದಿತು. ಈ ಪ್ರಯೋಗದ ಬೆಳವಣಿಗೆ, ವಿಸ್ತರಣಗಳ ವಿಷಯದಲ್ಲಿ ತಮ್ಮ ಅಂತ್ಯಕಾಲದವರಿಗೂ ಬಹಳ ಉತ್ಸುಕತೆಯನ್ನು ಅವರು ತಾಳಿದ್ದರು.

ನೂಲುವ ಅಥವಾ ನೇಯ್ಗೆಯ ಅಥವಾ ಇತರ ವೃತ್ತಿಗಳನ್ನು ಅನುಸರಿಸಲು ಸಮರ್ಥರಾದವರನ್ನು ತಯಾರಿಸುವುದು ಈ ಯೋಜನೆಯ ಉದ್ದೇಶವಲ್ಲವೆಂದು ನಾವು ನೆನಪಿನಲ್ಲಿಡಬೇಕು. ಆದರೆ ಕೈಕೆಲಸವನ್ನು ಕುಶಲತೆಯಿಂದ ಮಾಡಲು ಕಲಿತು ತನ್ಮೂಲಕ ಪ್ರಾಪಂಚಿಕ ಜ್ಞಾನವನ್ನು ಸ್ಪೈಜವಾದ ರೀತಿಯಲ್ಲಿ ಪಡೆದು ಸರ್ವತೋಮುಖವಾದ ವಿಕಾಸವನ್ನು ಹೊಂದಿದ ನೀತಿಯುತರಾದ ಸತ್ಪ್ರಜೆಗಳನ್ನು ಸಿದ್ಧಗೊಳಿಸುವುದೇ ಈ ನೂತನ ಶಿಕ್ಷಣಕ್ರಮದ ಆಶಯ.

ಈಗ ನೂರು ವರ್ಷಗಳಾಗಿ ನಮ್ಮ ದೇಶದಲ್ಲಿ ರೂಢಿಯಲ್ಲಿರುವ ಇಂಗ್ಲಿಷ್ ಶಿಕ್ಷಣವನ್ನು ಗಾಂಧೀಯವರಷ್ಟು ತೀವ್ರವಾಗಿ ಬೇರೆ ಯಾವ ದೇಶದ ನಾಯಕರೂ ಖಂಡಿಸಲಿಲ್ಲ. ಎಲ್ಲ ವಿಷಯಗಳಿಗೂ ಇಂಗ್ಲಿಷನ್ನೇ ಬೋಧಕ ಭಾಷೆಯನ್ನಾಗಿ ಉಪಯೋಗಿಸುತ್ತಿದ್ದುದನ್ನು ಅವರು ಬಹಳ ಕಟುವಾಗಿ ಟೀಕಿಸುತ್ತಿದ್ದರು. ಇದರಿಂದಲೇ ಭಾರತೀಯರ ಸಹಜವಾದ ಮೇಧಾ ಶಕ್ತಿಯೂ, ಸ್ವತಂತ್ರ ವಿಚಾರಶಕ್ತಿಯೂ ಬಹಳವಾಗಿ ಕುಗ್ಗಿರುವುದೆಂದು ಅವರ ಅಭಿಪ್ರಾಯವಾಗಿತ್ತು. ಇಂಗ್ಲೀಷು ಭಾಷೆಯ ಮೂಲಕ ಶಿಕ್ಷಣ ವನ್ನು ಹೊಂದಿದವರ ಜ್ಞಾನ ಒತ್ತುಕಾಗದದ ಗ್ರಹಣವಿದ್ದಂತೆ (Blotting paper learning) ಎಂದು ಬಹಳ ಸ್ವಾರಸ್ಯವಾದ ಉಪಮಾನವನ್ನು ಒಮ್ಮೆ ಕೊಟ್ಟರು. ದೇಶಕ್ಕೆಲ್ಲ ಒಂದು ರಾಷ್ಟ್ರಭಾಷೆ ಇರಬೇಕೆಂದು ಅವರೇ ಮೊದಲು ಪ್ರಸ್ತಾಪಿಸಿದವರು. ನಮ್ಮ ಪ್ರಾಂತೀಯ ಮತ್ತು ರಾಷ್ಟ್ರಭಾಷೆಗಳ ವ್ಯವ

ಸಾಯಕ್ಕೆ ಗಾಂಧೀಯವರಿಂದ ದೊರೆತ ಉತ್ತೇಜನ ಮತ್ತು ಸ್ಫೂರ್ತಿ ಅಷ್ಟಿಷ್ಟಲ್ಲ. ಈ ೨೫ ವರ್ಷಗಳಿಂದ ನಮ್ಮ ದೇಶಭಾಷೆಗಳಲ್ಲಿ ನಡೆಯುತ್ತಿರುವ ವ್ಯವಸಾಯಕ್ಕೆ ಅವರ ಸ್ಫೂರ್ತಿಯು ಬಹುಮಟ್ಟಿಗೆ ಕಾರಣವಾಗಿದೆ.

ಹಿಂದು ಯುವಕರು ಸಂಸ್ಕೃತವನ್ನೂ, ತಮ್ಮ ಧರ್ಮದ ಮುಖ್ಯ ತತ್ತ್ವಗಳನ್ನೂ ಶ್ರದ್ಧೆಯಿಂದ ಕಲಿಯಬೇಕೆಂದು ಗಾಂಧೀಯವರು ಅನೇಕ ಬಾರಿ ಒತ್ತಿ ಹೇಳಿದ್ದಾರೆ. ಜೀವನದಲ್ಲಿ ಸಂಯಮ, ಪ್ರಾಚೀನ ಗುರುಕುಲ ವಾಸದ ಯುವಕರು ಪಾಲಿಸಬೇಕಾಗಿದ್ದ ನೀತಿ ನಿಯಮಗಳ ಪುನರುಜ್ಜೀವನ ಈ ರೀತಿಯಲ್ಲಿ ನಮ್ಮ ಇಂದಿನ ಯುವಕರೂ ಶೀಲವಂತರಾಗಿ ಬೆಳೆಯಬೇಕೆಂದು ವಿದ್ಯಾರ್ಥಿಗಳನ್ನುದ್ದೇಶಿಸಿ ಗಾಂಧೀಯವರು ಅನೇಕಬಾರಿ ಮನಮುಟ್ಟುವಂತೆ ಮಾತಾಡಿದ್ದಾರೆ. ನಮ್ಮ ದೇಶದಲ್ಲಿ ಪ್ರಚಲಿತವಾಗಿರುವ ಅನೇಕ ಪೂರ್ವಾಚಾರಗಳನ್ನೂ ದೋಷಯುತವಾದ ಸಂಪ್ರದಾಯಗಳನ್ನೂ ನಿರ್ದಾಕ್ಷಿಣ್ಯವಾಗಿ ಖಂಡಿಸಿ ಸನಾತನಿಗಳ ಆಗ್ರಹಕ್ಕೆ ಅವರು ಪಾತ್ರರಾಗಿದ್ದರೂ ನಮ್ಮ ಧಾರ್ಮಿಕ ಸಂಸ್ಕೃತಿಯಲ್ಲಿಯೂ, ಆರ್ಷೇಯವಾದ ಸಾಧನ ವಿಶೇಷಗಳಲ್ಲಿ ಅವರ ಶ್ರದ್ಧೆಯು ಬಹಳ ಅಚಲವೂ ಗಾಢವೂ ಆಗಿದ್ದಿತೆಂದು ಸರ್ವರೂ ಒಪ್ಪಲೇ ಬೇಕು.

ನಮ್ಮ ಶಿಕ್ಷಣಕ್ಕೆ ಸಂಬಂಧಿಸಿದಂತೆ ಗಾಂಧೀಯವರ ಇತರ ಕೆಲವು ವಿಚಾರಗಳನ್ನು ಪ್ರಸ್ತಾಪಿಸಬಹುದು. ಕೇವಲ ಅಕ್ಷರಪ್ರಚಾರಕ್ಕೆ ಅವರು ಮಹತ್ವ ಕೊಡುತ್ತಿರಲಿಲ್ಲ. ವಯಸ್ಕರಿಗೆ ತಮ್ಮ ವೃತ್ತಿಗಳಲ್ಲಿಯೂ, ನಿತ್ಯ ಜೀವನದಲ್ಲಿಯೂ, ಫಲಕಾರಿಯಾಗುವಂತಹ ಶಿಕ್ಷಣವನ್ನು ಕೊಡುವುದೇ ಅಂತಹವರಲ್ಲಿ ಅಕ್ಷರಪ್ರಚಾರದ ಮುಖ್ಯ ಉದ್ದೇಶವಾಗಿರಬೇಕೆಂದು ಅವರ ಅಭಿಪ್ರಾಯವಾಗಿತ್ತು. ಪ್ರೌಢಶಿಕ್ಷಣವು—ಅಂದರೆ ವಿಶ್ವವಿದ್ಯಾನಿಲಯಗಳ ಮಟ್ಟಕ್ಕೆ ಸಂಬಂಧಿಸಿದ ಶಿಕ್ಷಣಕ್ಕೆ ದೇಶದ ಸರಕಾರವು ಹೊಣೆಗಾರಿಕೆಯನ್ನು ವಹಿಸಬೇಕಾಗಿಲ್ಲವೆಂದು ಅವರ ಒಂದು ವಾದ. ಅಂತೆಯೇ ವಿಜ್ಞಾನ ಮುಂತಾದ ಶಾಸ್ತ್ರಗಳ ವ್ಯಾಸಂಗಕ್ಕಾಗಿ ಬಹುಸಂಖ್ಯೆಯಲ್ಲಿ ನಮ್ಮ ಯುವಕರು ಅನ್ಯದೇಶಗಳಿಗೆ ಹೋಗುವುದರಲ್ಲಿ ಗಾಂಧೀಯವರಿಗೆ ವಿಶ್ವಾಸವಿರಲಿಲ್ಲ. ಆ ದೇಶಗಳಿಂದಲೇ ಸಮರ್ಥರನ್ನು ನಮ್ಮ ದೇಶಕ್ಕೆ ಬರಮಾಡಿಕೊಂಡು ನಮ್ಮ ಯುವಕರಿಗೆ ತರಬೇತನ್ನು ಕೊಡಿಸಬೇಕೆಂದೂ, ಮಿತವ್ಯಯದ ದೃಷ್ಟಿಯಿಂದಲೂ ಇದೇ ಸೂಕ್ತವೆಂದೂ ಗಾಂಧೀಯವರ ಸಲಹೆಯಾಗಿತ್ತು. ರಷ್ಯಾದೇಶದಲ್ಲಿಯೂ ಈ ರೀತಿಯ ಏರ್ಪಾಡನ್ನು ಅವರು ಮಾಡಿ ಅದರಿಂದ ಬಹಳ ಪ್ರಯೋಜನವನ್ನು ಪಡೆದರೆಂದು ನಾವು ಕೇಳುತ್ತೇವೆ.

ಇತರ ಕ್ಷೇತ್ರಗಳಲ್ಲಿದ್ದಂತೆ ಶಿಕ್ಷಣಕ್ಷೇತ್ರದಲ್ಲಿಯೂ ಗಾಂಧೀಯವರದು ಸ್ವದೇಶೀ ಸಿದ್ಧಾಂತವೆಂದು ಸಂಕ್ಷೇಪವಾಗಿ ಹೇಳಬಹುದು. ನಮ್ಮ ಸುತ್ತು ಮುತ್ತಲಿನ ಜನ, ಅವರ ಸೇವೆ—ಪ್ರಕೃತಿಯ ನಿಯಮಗಳನುಸಾರವಾಗಿ ಪ್ರತಿಯೊಬ್ಬರೂ ಸಂಯಮ, ತಿಳುವಳಿಕೆ, ಪ್ರೇಮ—ಇವುಗಳಿಂದ ಕೂಡಿದವರಾಗಿ—ಪ್ರಕೃತಿಯೊಂದಿಗೂ ಮಾನವಸಮಾಜದೊಂದಿಗೂ ಮಧುರಬಾಂಧವ್ಯವನ್ನು ಬೆಳಸಿ ಉದ್ಯೋಗಶೀಲರಾಗಿ ತಮ್ಮ ತಮ್ಮ ಜೀವನವನ್ನು ನಡೆಸಲು ಸಿದ್ಧರಾಗುವುದೇ ಗಾಂಧೀಯವರ ಶಿಕ್ಷಣತತ್ವದ ಇಂಗಿತ. ಅನೇಕ ವರ್ಷಗಳ ತಪಸ್ಸಿನ ಫಲವಾಗಿ ಮಾನವನ ವೈಯುಕ್ತಿಕ ಹಾಗೂ ಸಾಮೂಹಿಕ ಜೀವನದ ಕಲ್ಯಾಣಕ್ಕಾಗಿ ಯಾವ ತತ್ವಗಳನ್ನು ಪೂಜ್ಯ ಗಾಂಧೀಯವರು ನಮ್ಮ ಮುಂದಿಟ್ಟರೋ ಅವು ಸದಾ ನಮ್ಮ ದೃಷ್ಟಿಪಥದಲ್ಲಿರಲಿ! ಜೈ ಹಿಂದ್.



# ಗಾಂಧೀಜಿ ಮತ್ತು ವಿದ್ಯಾಭ್ಯಾಸಕ್ರಮ

ಡಿ. ಎಚ್. ಚಂದ್ರಶೇಖರಯ್ಯ

ಮಹಾತ್ಮ ಗಾಂಧಿಯವರನ್ನು ರಾಜನೀತಿವಿಶಾರದರೆಂದೂ ಸಮಾಜ ಸುಧಾರಕರೆಂದೂ, ಸಮತಾವಾದಿಗಳೆಂದೂ, ಕರ್ಮಯೋಗಿಗಳೆಂದೂ, ಇತ್ಯಾದಿಯಾಗಿ, ಹಲವು ರೀತಿಗಳಲ್ಲಿ ಕರೆಯುವ ವಾಡಿಕೆ ಇದೆ. ಇದಕ್ಕೆ ಕರೆಯುವವರ ಬೇರೆ ಬೇರೆ ದೃಷ್ಟಿಕೋನವೇ ಕಾರಣ. ನಾನಾದರೋ ಮಹಾತ್ಮರನ್ನು ಸುಧಾರಿಸಿದ ವಿದ್ಯಾಸಂಸ್ಥಾಪಕರೆಂದು ಸಂಭೋಧಿಸುತ್ತೇನೆ. ಅವರ ಪವಿತ್ರ ಜೀವನವು ಯಾವ ಮಾರ್ಗದಲ್ಲಿ ಪ್ರವೇಶಿಸಿದರೂ ಮತ್ತು ಅವರ ಕಾರ್ಯವು ಯಾವ ರೂಪವನ್ನು ತಾಳಿದರೂ ಹೇಗೆ ಹೊಸ ಸ್ಫೂರ್ತಿ—ವಿಧಾನ ವೈಶಿಷ್ಟ್ಯಗಳಿಂದ ಕೂಡಿದ್ದಿತೋ ಅಂತೆಯೇ ವಿದ್ಯಾಭ್ಯಾಸಕ್ಷೇತ್ರದಲ್ಲಿಯೂ ಅವರ ನೂತನ ವಿಚಾರವಾಹಿನಿಗಳು ವಿಪುಲವಾಗಿ ಹರಿಯುತ್ತಿದ್ದವು.

ಒಂದಾನೊಂದು ಕಾಲದಲ್ಲಿ ನಮ್ಮ ಭಾರತದೇಶವು ಸಕಲ ಸಂಪತ್ಸಮೃದ್ಧಿಯಿಂದಲೂ ಜ್ಞಾನ ಸಂಸ್ಕೃತಿಗಳ ಆಧಿಕ್ಯದಿಂದಲೂ ಹೆಸರುವಾಸಿಯಾಗಿದ್ದಿತು. ಆದರೆ ಕಾಲಗತಿಯಲ್ಲಿ ಇದೆಲ್ಲವೂ ಹಿಂದಕ್ಕೆ ಸರಿದು ಎಲ್ಲಿ ನೋಡಿದರೂ ಬಡವರೂ, ವಿದ್ಯಾವಿಹೀನರೂ, ಅಲ್ಪಾಯುಗಳೂ ಕಣ್ಣಿಗೆ ಕಾಣುವಂತಾಗಿದೆ. ಪೂರ್ವಕಾಲದ ವಿದ್ಯಾಭ್ಯಾಸಪದ್ಧತಿಯು ಎಷ್ಟೋ ಸಂಕುಚಿತವಾದ ಆವರಣದಲ್ಲಿ ನಡೆಯುತ್ತಿದ್ದರೂ ಜನಸಾಮಾನ್ಯನು ಮಾತ್ರ ಸುಖಿಯಾಗಿಯೂ, ಸುಸಂಸ್ಕೃತನಾಗಿಯೂ ಬಾಳುತ್ತಿದ್ದನೆಂಬುದಕ್ಕೆ ಸಾಕಾದಷ್ಟು ನಿದರ್ಶನಗಳಿವೆ.

ಮಹಾನುಭಾವರಾದ ಗಾಂಧಿಯವರು ನಮ್ಮ ದೇಶದ ಹೀನಸ್ಥಿತಿಯನ್ನು ಕಂಡು ಮನಮರುಗಿ ಇದರ ಪರಿಹಾರೋಪಾಯವನ್ನು ಚಿಂತಿಸುತ್ತಲೇ ಇದ್ದರು. ಅವರು ಭಾರತದೇಶವನ್ನು ಪರಕೀಯರ ಆಡಳಿತದಿಂದ ತಪ್ಪಿಸಿ ಸ್ವಾತಂತ್ರಗೊಳಿಸುವ ಅಗಾಧವಾದ ಕಾರ್ಯದಲ್ಲಿ ನಿರತರಾಗಿದ್ದರೂ, ರಚನಾತ್ಮಕ ಕಾರ್ಯಗಳ ಅವಶ್ಯಕತೆಯನ್ನು ಒತ್ತಿ ಒತ್ತಿ ಹೇಳದೆ ಎಂದೂ ಬಿಡಲಿಲ್ಲ. ಸ್ವಾತಂತ್ರ್ಯವು ದೇಶದ ಪುನರ್ನಿರ್ಮಾಣಕಾರ್ಯಕ್ಕೆ ಸಹಾಯಕವಾದ ಸನ್ನಿವೇಶ ಮಾತ್ರವೆಂದು ಎಷ್ಟೋ ಸಾರಿ ಹೇಳಿರುತ್ತಾರೆ. ದೇಶೋದ್ಧಾರ

ಕಾರ್ಯದಲ್ಲಿ ವಿದ್ಯಾಭ್ಯಾಸಕ್ಕೆ ಪ್ರಥಮಸ್ಥಾನವನ್ನು ಕೊಡವುದು ವಿಹಿತವೂ ಅಗತ್ಯವೂ ಆಗಿದೆ ಎಂಬುದನ್ನು ಹೇಳಬೇಕಾಗಿಲ್ಲ. ಮಹಾತ್ಮರು ಈಗಿನ ಕಾಲ ಮತ್ತು ಸಂದರ್ಭಗಳಿಗೆ ಹೊಂದಿಕೊಳ್ಳುವಂತೆ ಹೊಸ ಮಾದರಿಯ ವಿದ್ಯಾಭ್ಯಾಸ ಪದ್ಧತಿಯನ್ನು ಏರ್ಪಡಿಸಬೇಕೆಂದು ಸಂಕಲ್ಪಿಸಿದರು. ಈಗಿನ ವಿದ್ಯಾಭ್ಯಾಸಕ್ರಮದಲ್ಲಿ ಅಡಕವಾಗಿರುವ ಮುಖ್ಯ ಕೊರತೆಗಳು ಯಾವುವೆಂದರೆ: (೧) ಜನಸಾಮಾನ್ಯದಲ್ಲಿ, ವಿದ್ಯಾಭ್ಯಾಸವು ಹರಡಲು ಅವಕಾಶವಿಲ್ಲ. (೨) ಪಠ್ಯಪುಸ್ತಕಗಳಲ್ಲಿ ಬರೆದಿರುವುದನ್ನು ಮನಸ್ಸಿನಲ್ಲಿ ತುಂಬಿಕೊಳ್ಳುವುದೇ ಹೊರ ತಾಗಿ ಹೊಸ ವಿಷಯಗಳನ್ನು ಕಂಡುಹಿಡಿಯುವ ಬುದ್ಧಿಶಕ್ತಿಯು ಬೆಳೆಯು ವುದಿಲ್ಲ. (೩) ಪರೀಕ್ಷೆಗಳಿಗೆ ಅನವಶ್ಯಕವಾದ ಸ್ಥಾನಮಾನಗಳು ದೊರೆತು ನಿಜವಾದ ಮಾನಸಿಕ ಅಭಿವೃದ್ಧಿಗೆ ತಡೆಯಾಗಿದೆ. (೪) ಸೂಕ್ತವಾದ ಔದ್ಯೋಗಿಕ ಶಿಕ್ಷಣವು ದೊರೆಯದೆ ಗುಮಾಸ್ತಗಿರಿಯನ್ನು ಹುಡುಕಲು ದಾರಿ ಮಾಡಿರುತ್ತದೆ. (೫) ಶಾರೀರಿಕ ಮತ್ತು ನೈತಿಕ ಶಿಕ್ಷಣಕ್ಕೆ ತಕ್ಕಷ್ಟು ಗಮನವನ್ನು ಕೊಡುತ್ತಿಲ್ಲ. (೬) ಹಳ್ಳಿಗಾಡಿನ ಸಂಪರ್ಕವು ದಿನದಿನಕ್ಕೂ ಕಡಿಮೆಯಾಗುತ್ತಾ ಹೋಗುವ ಸಂಭವ ಉಂಟಾಗಿರುತ್ತೆ. ಸಂಗೀತವೇ ಇತ್ಯಾದಿ ಕುಶಲವಿದ್ಯೆಗಳು ಬಹುಮಟ್ಟಿಗೆ ಉಪೇಕ್ಷೆಮಾಡಲ್ಪಟ್ಟಿವೆ. ಈ ನ್ಯೂನತೆಗಳೇನೂ ಸಾಮಾನ್ಯವಾದವುಗಳಲ್ಲ. ಅವುಗಳ ನಿವಾರಣೆಗಾಗಿ ಹಲ ವಾರು ಪ್ರಯತ್ನಗಳು ಭರದಿಂದ ಸಾಗಿದ್ದರೂ ಫಲಕಾರಿಯಾದ ಘಟ್ಟವಿನ್ನೂ ಬಹು ದೂರದಲ್ಲಿ ಕಾಣುತ್ತಿದೆ.

ಮಹಾತ್ಮ ಗಾಂಧಿಯವರು "ಮೂಲಭೂತಶಿಕ್ಷಣ"ವೆಂದು ಕರೆಯ ಲ್ಪಟ್ಟಿರುವ ವಿದ್ಯಾಭ್ಯಾಸಕ್ರಮವನ್ನು ಸಾರ್ವತ್ರಿಕವಾಗಿ ಕಾರ್ಯರೂಪಕ್ಕೆ ತರುವಸಲುವಾಗಿ ೧೯೩೭ ನೇ ಸಾಲಿನಲ್ಲಿ ಅಖಿಲಭಾರತ ರಾಷ್ಟ್ರೀಯ ಶಿಕ್ಷಣ ಸಮ್ಮೇಳನವನ್ನು ಸಮಾವೇಶಗೊಳಿಸಿದರು. ಈ ಸಮ್ಮೇಳನಕ್ಕೆ ಮಹಾತ್ಮರೇ ಅಧ್ಯಕ್ಷತೆಯನ್ನು ವಹಿಸಿದ್ದರು. ಆಗತಾನೇ ಭಾರತದ ಏಳು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ಸ್ ಸರ್ಕಾರಗಳು ಏರ್ಪಾಡಾಗಿದ್ದವು. ಈ ಸಮ್ಮೇಳನವು ರಚಿಸಿದ ನಿಪುಣರ ಸಮಿತಿಯೊಂದು "ವಾರ್ಧಾ ಯೋಜನೆ"ಯನ್ನು ತಯಾರಿಸಿ ಜನತೆಯ ಮುಂದಿಟ್ಟಿತು. ಈ ಯೋಜನೆಗನುಸಾರವಾಗಿ ೧೯೩೮-೩೯ ನೆಯ ಸಾಲುಗಳಲ್ಲಿ ಕೆಲಕೆಲವು ಪ್ರಾಂತ್ಯಗಳಲ್ಲಿ ಪ್ರಾಯೋಗಿಕಶಾಲೆಗಳೂ ಉಪಾ ಧ್ಯಾಯರ ಶಿಕ್ಷಣಸಂಸ್ಥೆಗಳೂ ಸ್ಥಾಪಿತವಾದವು. ಸದ್ಯದಲ್ಲಿ ಬಿಹಾರ ಪ್ರಾಂತ್ಯದಲ್ಲಿ ಮಾತ್ರ ಮೂಲಶಿಕ್ಷಣಕ್ರಮವು ಯಶಸ್ವಿಯಾಗಿ ನಡೆದಿರುವು ದೆಂದು ತಿಳಿಯಬಂದಿರುತ್ತೆ. ಭಾರತದಲ್ಲೆಲ್ಲಾ ಇದೇ ಕ್ರಮವನ್ನೇ ಜಾರಿಗೆ

ತರಬೇಕೆಂದು ಕೇಂದ್ರಸರ್ಕಾರದವರು ತುಂಬಾ ಕಾತುರರಾಗಿರುತ್ತಾರೆ. ಒಟ್ಟು ವಿದ್ಯಾಭ್ಯಾಸಕ್ಕಾಗಿ ಅಂದಾಜುಮಾಡಿರುವ ೨೭೭ ಕೋಟಿ ರೂಪಾಯಿ ಮೊತ್ತದಲ್ಲಿ ೨೦೦ ಕೋಟಿ ರೂಪಾಯಿ ಈ ಮೂಲಶಿಕ್ಷಣಕ್ಕೆ ಬೇಕಾಗುವುದೆಂದು ಹೇಳಲಾಗಿದೆ.

ಮೂಲಶಿಕ್ಷಣವು ಮಕ್ಕಳ ಆರನೆಯ ವಯಸ್ಸಿನಿಂದ ಹಿಡಿದು ಹನ್ನೊಂದನೆ ವಯಸ್ಸಿನ ವರೆಗೆ ಜೂನಿಯರ್ ಭಾಗವೆಂದೂ, ಹನ್ನೊಂದರಿಂದ ಹದಿನಾಲ್ಕನೆ ವಯಸ್ಸಿನ ವರೆಗೆ ಸೀನಿಯರ್ ಭಾಗವೆಂದೂ ಎರಡು ಅಂತಸ್ತುಗಳನ್ನು ಒಳಗೊಂಡಿದೆ. ಎಂಟು ವರ್ಷಗಳ ಅವಧಿಯಲ್ಲಿ ಈಗಿನ ವಿದ್ಯಾಭ್ಯಾಸ ಕ್ರಮದಲ್ಲಿ ಸಂಭವಿಸುತ್ತಿರುವ ಅಪವ್ಯಯವನ್ನು ತಪ್ಪಿಸಬಹುದು. ವಿದ್ಯಾರ್ಥಿಗಳ ಶಿಕ್ಷಣವು ಆಯಾ ಪ್ರದೇಶದ ಉದ್ಯೋಗಗಳಾದ ವ್ಯವಸಾಯ ಕೈಗಾರಿಕೆಗಳನ್ನವಲಂಬಿಸಿ ಕೈಕೆಲಸಗಳ ಮೂಲಕ ನಡೆಯುವುದು ಶಾಸ್ತ್ರೀಯವಾದ ವಿಧಾನವೆಂದು ಮುಂದುವರಿದ ಎಲ್ಲಾ ದೇಶಗಳೂ ಅಂಗೀಕರಿಸಿವೆ. ರಷ್ಯಾದೇಶದ (Politechnisation) 'ಔದ್ಯೋಗಿಕ ಶಿಕ್ಷಣ' ಪದ್ಧತಿಯು ಇದೇ ತತ್ತ್ವದ ಮೇಲೆ ರಚಿಸಲ್ಪಟ್ಟಿದೆ. ಈ ತೆರನಾದ ಅಭ್ಯಾಸದಿಂದ ಔದ್ಯೋಗಿಕ ನೈಪುಣ್ಯತೆಯು ದೊರೆಯುವುದಲ್ಲದೆ ಮುಂದೆ ಮೇಲ್ತರಗತಿಯ ಔದ್ಯೋಗಿಕ ಪರಿಶ್ರಮಕ್ಕೂ ವೈಜ್ಞಾನಿಕ ಅಭ್ಯಾಸಕ್ಕೂ ಸಹಾಯವಾಗುವುದು. ಶಾರೀರಿಕ ಮತ್ತು ನೈತಿಕ ಬೆಳವಣಿಗೆಗೂ ಮತ್ತು ಲಲಿತಕಲೆಗಳ ಅಭ್ಯಾಸಕ್ಕೂ ತಕ್ಕ ಗಮನವನ್ನು ಕೊಡಲಾಗುವುದು; ವಿದ್ಯಾವಂತನಾದ ಪ್ರತಿ ಒಬ್ಬನೂ ಉಚ್ಚತರ ಪೌರತ್ವಗುಣಗಳನ್ನೂ ಸಂಪಾದಿಸಿದವನಾಗಿ ಜನಾಂಗದ ಸುವ್ಯವಸ್ಥೆಗೆ ಭದ್ರವಾದ ತಳಹದಿಯನ್ನು ನಿರ್ಮಿಸಲು ಶಕ್ತನಾಗುತ್ತಾನೆ. ಇವೇ ಮೂಲಶಿಕ್ಷಣದ ಮಹತ್ವಾಕಾಂಕ್ಷೆಗಳು. ಇದೇ ಮಹಾತ್ಮರ ಪವಿತ್ರ ಜೀವನದ ಸವಿಗನಸುಗಳಲ್ಲಿ ಒಂದಾಗಿದ್ದಿತು.

ಮೂಲಶಿಕ್ಷಣವು ಚಿಕ್ಕವಯಸ್ಸಿನವರನ್ನು ಸತ್ಪ್ರಜೆಗಳನ್ನಾಗಿ ಮಾಡುವ ಕಾರ್ಯಕ್ರಮವನ್ನು ಕೈಗೊಂಡಿದೆ. ಹಾಗಾದರೆ ವಯಸ್ಸಾದವರನ್ನು ಸುಧಾರಿಸುವ ಬಗೆಯೇನು? ಮಹಾತ್ಮರು ಈ ಸಮಸ್ಯೆಯನ್ನು ಕೂಡ ಚಿಂತಿಸದಿರಲಿಲ್ಲ. ಅವರು ಜನತೆಯ ಮುಂದಿಟ್ಟ ರಚನಾತ್ಮಕ ಕಾರ್ಯಕ್ರಮದಲ್ಲಿ ವಯಸ್ಕರ ವಿದ್ಯಾಭ್ಯಾಸವು ಒಂದು ಸ್ಥಾನವನ್ನು ಪಡೆದಿದೆ. ಜನರಿಗೆ ಅದರಲ್ಲಿಯೂ ಹಳ್ಳಿಗಾಡಿನ ನಿವಾಸಿಗಳಿಗೆ ಓದುಬರಹವನ್ನು ಕಲಿಸುವುದಕ್ಕೂ ಮತ್ತು ಅವರಿಗೆ ಚರಿತ್ರೆ ಮುಂತಾದ ಹಲವು ವಿಷಯಗಳಲ್ಲಿ ಸಾಮಾನ್ಯ

ತಿಳಿವಳಿಕೆಯನ್ನುಂಟುಮಾಡುವುದಕ್ಕೂ ಕಾರ್ಯಕರ್ತರು ಪ್ರಯತ್ನಿಸ ಬೇಕೆಂದು ಉಪದೇಶಿಸಿರುತ್ತಾರೆ.

ಇದುವರೆಗೂ ವಿದ್ಯಾಭ್ಯಾಸ ಎಂಬ ಪದವನ್ನು ಇಹಲೋಕಸಾಧಕವಾದ ಒಂದು ಸಾಮಾನ್ಯ ತಿಳುವಳಿಕೆ ಎಂಬ ಅರ್ಥದಲ್ಲಿ ಉಪಯೋಗಿಸಿದೆನು. ಆದರೆ ಇಷ್ಟರಿಂದಲೇ ಮಹಾತ್ಮರ ವಿದ್ಯಾಪ್ರಸಾರಕಾರ್ಯವನ್ನು ಸಂಪೂರ್ಣವಾಗಿ ವಿವರಿಸಿದಂತಾಗುವುದಿಲ್ಲ. ನಮ್ಮ ಪವಿತ್ರಗ್ರಂಥವಾದ ಗೀತೆಯಲ್ಲಿ "ಜ್ಞಾನಕ್ಕಿಂತಲೂ ಉತ್ತಮವಾದ ವಿದ್ಯೆಯು ಬೇರೊಂದಿಲ್ಲ"ವೆಂದು ಹೇಳಿದೆ. ಈ ಅರ್ಥದಲ್ಲಿ ಮಹಾತ್ಮರು ಪರಮ ಜ್ಞಾನಿಗಳೆನಿಸಿ ಲೋಕಕಲ್ಯಾಣಕ್ಕಾಗಿ ಶ್ರಮಿಸಿರುತ್ತಾರೆ. ಅವರು ತಮ್ಮ ಪಾರ್ಥಿವ ಶರೀರವನ್ನು ತ್ಯಜಿಸಿ ನಮ್ಮ ಕಣ್ಮರೆಯಾಗಿದ್ದರೂ ಅವರ ಆತ್ಮಜ್ಯೋತಿಯು ಈಗಲೂ ಅಚ್ಚಳಿಯದಂತೆ ಕಂಗೊಳಿಸುತ್ತಿದೆ. ಜಗತ್ತಿನ ಮೂಲೆಮೂಲೆಗಳಲ್ಲಿಯೂ ಮಹಾತ್ಮರ ದಿವ್ಯ ತೇಜಸ್ಸು ಪ್ರಕಾಶಿಸುತ್ತಿದೆ. ಆ ಮಹಾಮಹಿಮರ ಉಪದೇಶಾಮೃತವನ್ನು ಪಾನಮಾಡಿ ಸುಖಶಾಂತಿಗಳನ್ನು ಪಡೆಯಲು ಸಕಲ ಮಾನವರೂ ಹಾತೊರೆಯುತ್ತಿದ್ದಾರೆ. ಇದೀಗ ಪೂಜ್ಯಬಾಪೂಜಿಯ ಅಗೋಚರವಾದ ಮತ್ತು ಮಾನವಾತೀತ ಜ್ಞಾನಪ್ರಭೆ. ಅವರು ಸಕಲ ಧರ್ಮಗಳ ಸಾರವೂ ಸಮನ್ವಯರೂಪವೂ ಆದ ಧರ್ಮತತ್ವಗಳನ್ನು ಬೋಧಿಸುತ್ತಿದ್ದರು. ಮಾನವನ ಶ್ರೇಷ್ಠತೆಯನ್ನು ಎತ್ತಿಹಿಡಿಯುವ ಶೀಲಸದ್ಗುಣಗಳನ್ನು ಪ್ರಚಾರಮಾಡುತ್ತಿದ್ದರು. ಕೀಳುಮೇಲುಗಳೆಂಬ ಭಾವನಾರಹಿತರಾಗಿ ಪರಸ್ಪರ ಸಮಾನತೆ ಸೌಹಾರ್ದಗಳನ್ನು ಸಾರುತ್ತಿದ್ದರು. ಆಡಂಬರವಿಲ್ಲದ ಮತ್ತು ಸೇವಾಮಯವಾದ ಜೀವನವನ್ನು ನಡೆಸುತ್ತಿದ್ದರು. ರಾಜಕೀಯದಲ್ಲಿಯೂ ಧರ್ಮಸೂಕ್ಷ್ಮತೆಯನ್ನು ಅಳವಡಿಸಿದ್ದರು. ಸತ್ಯ ಮತ್ತು ಅಹಿಂಸೆ ಎಂಬ ಮಹಾತತ್ವಗಳ ಆಚರಣೆಯಲ್ಲಿ ಅತುಲ ಆಸಕ್ತಿಯನ್ನು ಹೊಂದಿದ್ದರು. ಅವರು ಅನುಸರಿಸಿದ ಜೀವನಯಾತ್ರೆಯೂ, ಅನುಭವಿಸಿದ ಕಷ್ಟಪರಂಪರೆಗಳೂ ಬರವಣಿಗೆ ಭಾಷಣಗಳಿಂದ ಹೊರಗೆಡಹಿದ ಹಿತೋಪದೇಶಗಳೂ ಸಾಧಿಸಿದ ಕಾರ್ಯಕಲಾಪಗಳೂ ಅಗಾಧವಾಗಿವೆ. ಇನ್‌ಸ್ಟೀನ್ ಎಂಬೊಬ್ಬ ಪ್ರಸಿದ್ಧ ವೈಜ್ಞಾನಿಕನು ಮಹಾತ್ಮ ಗಾಂಧಿಯವರಂತಹ ಮಾನವನು ಜೀವಂತನಾಗಿದ್ದನೆಂಬುದನ್ನು ಮುಂದಿನ ಜನಾಂಗವೇ ನಂಬದಿರಬಹುದೇನೋ ಎಂದು ಶಂಕೆಯನ್ನು ವ್ಯಕ್ತಪಡಿಸಿದ್ದಾನೆ. ಇಂತಹ ಸಿದ್ಧಪುರುಷನು ಜನ್ಮವೆತ್ತಿದ ನಮ್ಮ ದೇಶವೇ ಪುಣ್ಯಭೂಮಿ. ಇಂತಹ ಜಗದಾಚಾರ್ಯನ ಮಾರ್ಗದರ್ಶನದಲ್ಲಿ ಬಾಳಿದ ನಾವುಗಳೇ ಧನ್ಯರು.

ಮಹಾತ್ಮರು ಮೈಸೂರು ಸಂಸ್ಥಾನಕ್ಕೂ ಮತ್ತು ಸಂಸ್ಥಾನದ ಜನರಿಗೂ ಚಿರಪರಿಚಿತರಾಗಿದ್ದರು. ಅವರ ಹಿತೋಪದೇಶವನ್ನೂ ಆಶೀರ್ವಾದವನ್ನೂ ಹಲವು ಬಾರಿ ಪಡೆಯುವ ಸುಯೋಗವು ನಮ್ಮ ಸಂಸ್ಥಾನಕ್ಕೆ ಒದಗುತ್ತಲಿತ್ತು. ಆ ಮಹಾತ್ಮರು ತೋರಿಸಿದ ಮಾರ್ಗಗಳೂ ಸಾಧನಗಳೂ ನಮಗೆ ಯಾವಾಗಲೂ ಪ್ರಿಯವಾಗಿವೆ. ನಮ್ಮ ಸಂಸ್ಥಾನದಲ್ಲಿ ಮೂಲಶಿಕ್ಷಣ ಪದ್ಧತಿಯನ್ನು ಪ್ರಾಯೋಗಿಕವಾಗಿ ಆಗಲೇ ಕೆಲವು ಕಡೆಗಳಲ್ಲಿ ಪ್ರಾರಂಭಮಾಡಿದೆ. ಇದನ್ನು ಸಾರ್ವತ್ರಿಕವಾಗಿ ಅನುಷ್ಠಾನಕ್ಕೆ ತರಲು ತಕ್ಕ ವ್ಯವಸ್ಥೆಯನ್ನು ಮಾಡಬೇಕಾಗಿದೆ. ಈಗ ನಾಲ್ಕು ವರ್ಷ ಪ್ರಾಥಮಿಕ ವಿದ್ಯಾಭ್ಯಾಸವೂ ನಾಲ್ಕು ವರ್ಷ ಮಾಧ್ಯಮಿಕ ವಿದ್ಯಾಭ್ಯಾಸವೂ ನಡೆಯುತ್ತಿರುವುದನ್ನು ಬದಲಾಯಿಸಿ ಮೂಲಶಿಕ್ಷಣಕ್ಕೆ ಸರಿಹೊಂದುವಂತೆ ಏರ್ಪಡಿಸಬೇಕಾಗಿದೆ. ಈ ಏರ್ಪಾಟಿಗೆ ತಕ್ಕ ಸಹಾಯ ಸಲಕರಣೆಗಳು ದೊರತಂತೆಲ್ಲಾ ನಮ್ಮ ಕಾರ್ಯವು ವಿಸ್ತಾರವಾಗುವುದು. ವಯಸ್ಕರ ವಿದ್ಯಾಭ್ಯಾಸದ ವಿಷಯದಲ್ಲಿಯೂ ಸಾಧ್ಯವಾದ ಪ್ರಯತ್ನಗಳೆಲ್ಲವೂ ಭರದಿಂದ ಸಾಗಿವೆ. ಕಡೆಯದಾಗಿ ಮಹಾತ್ಮರ ಪವಿತ್ರನಾಮಸ್ಮರಣೆಯು ನಮ್ಮ ಕಾರ್ಯಗಳೆಲ್ಲಕ್ಕೂ ಸ್ಫೂರ್ತಿಯನ್ನುಂಟುಮಾಡತಕ್ಕ ಮಹಾಶಕ್ತಿಯಾಗಿರಲೆಂದು ಹಾರೈಸಿ ವಿರಮಿಸುತ್ತೇನೆ.



# ಸತ್ಯಂ ಶಿವಂ ಸುಂದರಂ

ಸಿ. ಕೆ. ವೆಂಕಟರಾಮಯ್ಯ

ನಾನು ಈದಿವಸ ಮಾತನಾಡಲು ಗೊತ್ತಾಗಿರುವ ವಿಷಯ, "Gandhiji and Literature"—"ಮಹಾತ್ಮಾ ಗಾಂಧೀಜಿಯವರು ಮತ್ತು ಸಾಹಿತ್ಯ" ಅನ್ನುವುದು.

ಪೂಜ್ಯ ಬಾಪೂಜಿಯವರು ಗುಜರಾತಿ ಭಾಷೆಯಲ್ಲೂ, ಇಂಗ್ಲಿಷ್ ಭಾಷೆಯಲ್ಲೂ ಮತ್ತು ಹಿಂದಿ ಭಾಷೆಯಲ್ಲೂ ಉದ್ದಾಮ ಪಾಂಡಿತ್ಯವನ್ನು ಪಡೆದವರು; ಅಸುಪಮವಾದ ಶೈಲಿಯಲ್ಲಿ ಹಲವು ಗ್ರಂಥಗಳನ್ನು ಬರೆದವರು. ಅವರು ಬರೆದಿರುವ ಆತ್ಮಕಥೆಯನ್ನು ಪ್ರಪಂಚವೇ ಮೆಚ್ಚಿ ಶ್ಲಾಘಿಸಿದೆ. "ಯಂಗ್ ಇಂಡಿಯ," "ನವಜೀವನ್" ಮತ್ತು "ಹರಿಜನ್" ಪತ್ರಿಕೆಗಳಲ್ಲಿ ಕಣ್ಣಿಗೆ ಒತ್ತಿಕೊಳ್ಳುವಂತಹ—ಪ್ರಪಂಚದ ಜನಜೀವನವನ್ನೇ ಉದ್ಧರಿಸಿ ನಿಜವಾದ ಸಂಸ್ಕೃತಿಯನ್ನು ವೃದ್ಧಿಪಡಿಸಲು ಸಾಧಕವಾದಂಥ—ಲೇಖನ ರಾಶಿಯನ್ನು ಪ್ರಕಟಿಸಿ ಸಮಸ್ತ ಜನಾಂಗಗಳಿಗೂ ದಾರಿ ತೋರಿಸಿದ್ದಾರೆ.

ಬಾಪೂಜಿಯವರದು ಋಷಿಜೀವನ; ಅವರ ಬರೆವಣಿಗೆ ಅಮರವಾದ ವಿಚಾರ ಸಾಹಿತ್ಯ. ಶೋಕ ಸಂತಾಪಗಳಿಂದಲೂ, ಸಹಾನುಭೂತಿ ಕರುಣೆಗಳಿಂದಲೂ ತುಂಬಿತ್ತು ಅವರ ವಿಶ್ವಪ್ರೇಮದ ವಿಶಾಲ ಹೃದಯ. ಹೀನಕೃತ್ಯಗಳನ್ನಾಚರಿಸಿ ಕಠಿಣಶಿಕ್ಷೆಗಳಿಗೆ ಗುರಿಯಾದ ಅಪರಾಧಿಗಳನ್ನೂ ಕೂಡ, ರೋಗಿಗಳೆಂದು ವರ್ಣಿಸಿ, ಅವರನ್ನು ವಿಶ್ವಾಸದಿಂದ ನೋಡಿಕೊಳ್ಳುವಂತೆ ಕಾರಾಗೃಹದ ಕಾವಲುಗಾರರನ್ನು ಕೇಳಿಕೊಂಡವರು, ಅಜಾತ ಶತ್ರು ಬಾಪೂಜಿ. ಬಾಪೂಜಿಯವರ ಶಾಂತಿ ಸ್ನೇಹಗಳ ಸಂದೇಶವೂ ಅಹಿಂಸಾವೃತ್ತಿಯೂ ಸರಿಬೀಳದೆ ಉದ್ರೇಕಗೊಂಡ ನಿರಾಶ್ರಿತರು ಗಾಂಧಿಜಿಯವರನ್ನು "ನೀವು ಹಿಮಾಲಯಕ್ಕೆ ಹೊರಟು ಹೋಗಿ" ಎಂದರು. ಆಗ ಶಾಂತಮೂರ್ತಿ ಬಾಪೂಜಿಯವರಿಂದ "ನೀವು ಇಲ್ಲಿರುವಾಗ ನಾನು ಹಿಮಾಲಯಕ್ಕೆ ಹೇಗೆ ಹೋಗಲಿ? ನೀವೂ ಅಲ್ಲಿಗೆ ಬಂದರೆ ನಾನೂ ಬರುತ್ತೇನೆ" ಎಂದು ಸಮಾಧಾನದ ಉತ್ತರ ಬಂತು. ಅಹಿಂಸಾ ತತ್ತ್ವವನ್ನು ಆಶ್ರಯಿಸಿದವನ ಹೃದಯದಲ್ಲಿ ದ್ವೇಷಕ್ಕೆ ಸ್ಥಾನವಿಲ್ಲ

# ಕೈಮುಗಿವ ಗಾಂಧಿ

ವಿ. ಸೀತಾರಾಮಯ್ಯ

ಗುಂಡಿಟ್ಟು ಗೋಡ್ಸೆ ಸುಡುತಿರಲು ಅವಗೆ ಕೈಮುಗಿದಿರೋ, ಗಾಂಧಿ!
ಕಾಲದಪ್ಪಣೆ ಕಡೆಗೆ ಬಂದಿತೆಂದರಿತು
ಮುಗಿದ ಕೈ ಮುಗಿದಂತೆ ಮೇಲೆತ್ತಿ ಹಿಡಿದಿರಲು
ಅಂತೆ ತೆರೆಯಿತು ನಿಮಗೆ ಜವರಾಯ ಸೊಲವು.
ಇಳೆಯ ಹೊರೆಗಳು ಇಳಿದು ಋಣ ಮುಗಿದು ಬಾಳು ಹಗುರಾಯ್ತು
ಘಾತಕನ ಕೊಲೆಕೋಪಿ ಗೋಲಿಕಾರುತ್ತಿರಲು
ಒಂದಾದ ಮೇಲೊಂದು, ಒಂದೆರಡು ಮೂರು!
ಕೋಪವೇ ನಿಮಗೆ? ಅದುರಿತೇ ತುಟಿಯು?
ಹಗೆ ತಣಿಯಲೆಂಬಂತೆ ಮನಸು ಸುಮನಸವಾಯ್ತು
ಪರಿಶಾಂತವಾಯ್ತು.
ಕಾಳಕೂಟವ ಶಿವನು ಕುಡಿದು ಜೀರ್ಣಿಸಿದಂತೆ
ನಾಡ ವಿಷವನು ಉಂಡು ಕೇಡ ಹೀರಿದಿರಿ.
ಹಿಗ್ಗಿದುದೆ ಧರೆ ಕೊಲೆಗೆ? ಹಿಂಗಿತೇ ಋಣವವಗೆ, ನಮಗೆ?
ಎಂತು ಹಿಗ್ಗೀತು ಹಗೆಯು? ಎಂದು ಹಿಂಗೀತು ಋಣವು?

೨

ಮೃತ್ಯುವಿಂದಮೃತತೆಗೆ ಏರಿದ ಮಹಾಪುರುಷ,
ನಿಮ್ಮೊತ್ತುಗೈ ಮುಗಿವ ದರ್ಶನವೆ ಕಾಲಕಾಲಕ್ಕು, ಇನ್ನು,
ನೆತ್ತರನ್ನು ರಿಸುವುದು, ಜಗಜಯಿ ಎದೆಬಯಲನಾಕ್ರಮಿಸಿ ಬಲಿದು.
ಹಗೆಗೆ ಮುನಿಯದು ನಿಮ್ಮ ಮನಸು,
ವಿರಸವನು ನಾಲಗೆಗೆ ತಾರದಿನಿಸು.
ಒಂದು ಬಾಳಿನ ಬೆಳಸು ಸಂಯಮದ ದೂಕ್ಷತೆಯ
ಶಾಂತಿ ಸೌಜನ್ಯವನು ರೂಡಿಸಿದ ನಿಮ್ಮಂಥ ಬದುಕು
ಇನ್ನೆಂದು ಬಂದೀತು ಭುವಿಗೆ? ಬೇರೆಂತು ಬಂದೀತು ಒಸಗೆ?

೩

ಇಂತೆಯೇ ಕೈಯೆತ್ತಿ ಮುಗಿದು, ಮುಗಿದು,
ನಾಡ ಜನವನು ಬೇಡಿ ದಣಿದಿರ್ಗೈ ದಿಸವೂ
ಹಗಲಿರುಳು, ಬಾಳಿನುದ್ದಕ್ಕು :—
ಕೇಳಿದರೊ ಒಳಿತು,— ಒಲಿಸಿ ನಡೆದಿರಿ ಮುಂದೆ
ಕೇಳರೋ ಅದು ಒಳಿತೆ; ನಿಲ್ಲದೆಯೆ ಕೈಮುಗಿದೆ
ನಡೆದಿರ್ಗೈ ಮುಂದೆ.
ನಿಮ್ಮವರ ನಸ್ನಿಗರ ಹಿಂದು ಸಿಖ್ ಮುಸಲ ಹರಿಜನರ.
ನಿಮ್ಮೊಲವು ಧೀರ ಮಾನವತೆಯೇ ಅಡಿಗಡಿಗು ಕಾಡಿತ್ತು,
ಬೆನ್ನಟ್ಟಿ ಬೇಟೆಯಾಡಿತ್ತು.

ನೀವಟ್ಟಿ ಪಾರಾದರಾವ ಜನರು?
ಸ್ಮಟ್ಸ್ ಅರ್ವಿನ್ ಆಟ್ಲಿ ಅಂಬೇಡ್ಕರ್?
ಪಾರಾಗಬಯಸಿದರು ಕೆಲಬರೆಮ್ಮವರೇ—
ಭಾರತದಿ ಸರಿಹಿರಿಮೆ ಸರುವರಿಗು ಸಲ್ಲದೆಂದವರು.
ಮೂರು ಲೋಕವು ಎಮ್ಮ ನಾಡೆಂಬುದಾರತೆಯ
ಭವ್ಯ ಕೋಲಾಹಲದಿ ಉಬ್ಬಿದಭಿಮಾನವನು
ಕ್ರೋಧ ಕಾರ್ಪಣ್ಯಕ್ಕೆ ಸಣ್ಣಿಸುವ ನರರು.
—ಭಾರತಕೆ ಸಲ್ಲದಿದು ನಡೆಯೆಂದು ಸಾರಿದಿರಿ
ಸಂತತವೊಡಂಬಡಿಸಿ ಒಲಿಸಿದಿರಿ
ಕೆಳೆಬೆಸುಗೆಗಳ ಬೆಸೆದೆ ನಾಡ ಕಟ್ಟಿದಿರಿ
ಬಾನಿನೆತ್ತರಕದನು ನಿಲಿಸಿ ಹೊಂಗಳಸ ಮುಡಿಸಿ;
ಹಿಂಸೆ ಹಗೆತನದಿಂದ ಮಾನವಗೆ ವಿನಿಪಾತವೆಂದು ತೋರಿ
ಭಾರತದ ಶುಚಿಕೀರ್ತಿ ಕಂದದಿರಲೆಂದು ಕೋರಿ . . .

೪

ಎಂದಿಗೂ ಇದುವೆ ಕರೆ ಈ ನಾಡಿನಲ್ಲಿ
ಎಂದಿಗೂ ಇದೆ ಇದುವೆ ಎತ್ತಿದಾದರ್ಶ.
'ನಾನ್ಯಃ ಪಂಥಾ ವಿದ್ಯತೇ ಯನಾಯ,'
'ಮಾ ವಿದ್ವಿಷಾವಹೈ'—ಇದುವೆ ಆದೇಶ.

ಇನ್ನು ನುಡಿವವರಾರು ಮಿದುಬಗೆಯ ಬೆಳ್ಗಾಂತಿನುಡಿಯು
ಇನ್ನಾರೊ ನಡೆವರಾ ಬೆಳ್ಗಿಚ್ಚು ನಡೆಯ?
ಬಲ್ಮೆಯಾಕ್ರೋಶಕ್ಕೆ ಮಣಿಯದಿಹ ಶಿರ ನಿಮತು
ಬಲಿದನೌದಾರ್ಯಕ್ಕೆ ಕನಲ್ವ ಕ್ಷಾತ್ರ,
ಅರನಡೆಗೆ ಆತಂಕ ವೊಡ್ಡುವೆಡೆಯಲ್ಲೆಲ್ಲ
ಎಂದಿಗೂ ಮುನ್ನಡೆವ ಸತ್ವದುರ್ಕು.
ಇನ್ನೆಂದು ಮುರಳಿ ಕಂಡೀತು ಇಳೆಯ?
ಕಂಡಾಗ ಮಚ್ಚರಿಸಿ ಕೊಲುವ ಇಳೆಯು.

೫

ನೂರಾರು ವರ್ಷಕ್ಕೆ ಸಾವಿರಕೆ ಎರಡಕ್ಕೆ
ಅಲ್ಲಿ ಯೇಸುಕ್ರಿಸ್ತ, ಇಲ್ಲೆಮ್ಮ ಸಿದ್ಧಾರ್ಥ
ಸಂರಾಜಪುತ್ರ ಸುಭ್ರಾತೃ ಬಾಹುಬಲಿಯಂತೆ
ಭೂಮಿಗತಿಶಯದಂತೆ, ಸಗ್ಗದಿಂದಿಳಿದರಂಬಂತೆ
ಬಲವನೊಲವಿಗೆ ನೀವು ತಿರುಗಿಸಿದಿರಿ.
ಕ್ಷಮೆಗೆ ತ್ಯಾಗಕ್ಕೆ ತೇದಿರೊಡಲ.
ನಯದೊಳ್ಪನೇ ಬಳಸಿ ಕೈಚಾಚಿ ಬಾಚಿದಿರಿ ಬಳಿಗೆ
ನರನಮರನಾಗಲಿಹ ದಾರಿಯದು ಒಂದೆ ಎನುತೆ
ಒಡಲು, ಮನ, ಎದೆಯಾಸೆ, ಅಧ್ಯಾತ್ಮ ಸಾಸ
ರಕುತಗಳ ಆವೇಗ, ಕಣ್ಣು ಕಿವಿಗಳ ತುಂಬಿ ಮೀರಿವರಿದು
ನಡೆನುಡಿವ ತೊಂಗುವಾ ಸುಮನೋವಿಲಾಸ—
ಈ ಒಂದೆ ಗುರಿಯ ಕಡೆ ನಡೆದರೇ ಸೊಬಗೆಂದಿರಿ
ಬಾಳ ಸಫಲತೆಯದುವೆ, ಆವೊಂದೆ ಬೆಳಕೆಂದಿರಿ.
ಒಂಟಿತನವೇ, ಸೆರೆಯೆ, ಬೀರ್ಗಲ್ಲೆ, ಕೋವಿಯಂಜಿಕೆಯೆ
ತನ್ನವರೆ ಹೇರುತಿಹ ಅಪವಾದಭೀತಿಯೇ ಖಾತಿಯೆ?
ಕರೆಯುತಿಹ ಕವಿಸುತಿಹ ಶಾಪತಾಪಗಳೆ
ತಡೆಸೆರೆದು ನಿಮ್ಮ ಕೈ ಬಗ್ಗಿಸಿದವೆ? ನಿಮ್ಮ ತಲೆ ತಗ್ಗಿಸಿದವೆ?
ನೀವೂಡುತಿಹ ಕೆಳೆಗೆ ಮಾರ್ಮಲೆದು ಜರೆದು
ವಿರಸವನು ಬಿತ್ತುತ್ತೆ ಕೊಂಡುನಡೆ ನಡೆದು
ಕೊಲೆಗೆ ಕೊಲೆಸಂತತಿಯ ನಿಡುವವರ ಬೇಡಿದಿರಿ

ಒಂದು ನೂಳೊಲವಿಗೊಲಯೆಂದಿರಿ; ಕೈಯ ಮುಗಿ ಮುಗಿದಿರಿ.
ಚೌರಿಚೌರದಲಿ ನವಖಾಲಿಯಲ್ಲಿ
ಬೀಹಾರದಲ್ಲಿ ನವದೆಹಲಿಯಲ್ಲಿ,
ಬಿಡುಗಡೆಗೆ ನಾಡನ್ನು ನಡಸಿ ಹೊಸಹಾಡ ಹಾಡಿಸಿದಿರಿ.
ಮಕ್ಕಳನು ಹೆಣ್ಗಳನು ಕೆಳಗೆ ಬಿದ್ದಾರ್ತರನು
        ಮೇಲೆತ್ತಿ ಸಂತೈಸಿ ಬದುಕಿಸಿದಿರಿ
        ನಯದ ಒಳಗಣ್ ತೆರೆದು ಸರಸ ಹಾಯಿಸಿದಿರಿ.
ಎಂದೆಂದು ಕಿವಿಗೆ ಕೇಳೀತು ನಿಮ್ಮದೇ ಈ ಸಾಧು ನುಡಿಯು
ಕಣ್ತೆರೆಯೆ ಕಂಡೀತು ಎಲ್ಲೆಲ್ಲು ಆ ಮುಗಿದ ಕೈಯೇ.
ಎದೆಯು ಸಂಕೋಚದಲಿ ಕಲ್ಲಾದ ಮಾನವತೆ
ಕರಗಿ ಹೊಸಲಾಗಿಸುವ ಹಿರಿಯ ನಡೆಯೇ
ಇದುವೆ ನಿಮ್ಮುದ್ದಾರಚರಿತೆ; ಇದುವೆ ನೀವುತ್ತನೆಲನು
ನಿಮ್ಮನೇ ನೀವ್ಬಿತ್ತಿ ಬೆಳಸಿರುವ ಬೆಳಸು.
ಬಾಳ ಚರಿತಾರ್ಥತೆಗೆ ಬೇರೆ ಪಥವೇನುಂಟು
                                        ಓ ತಂದೆ, ಗಾಂಧೀ

ನಿಮ್ಮ ಋಣವೆಂದು ಮುಗಿದೀತು ಇಳೆಗೆ?
ಭಾರತಕೆ ನಿಮ್ಮ ಋಣವೆಂತು ತೀರೀತು?
ಆ ಬೆಳೆಗೆ ಬದುಕು ಮೈಯಿಕ್ಕುತಿರಲೆಂದು
ಆ ಬೆಳಕೆ ಬಾಳನ್ನು ಬೆಳಗುತಿರಲೆಂದು.
ನದಿಯಲ್ಲಿ ಕೂಡಲಲಿ ಕೊಳದಲ್ಲಿ ಸರದಲ್ಲಿ
ಕಡಲಲ್ಲಿ ತೀರ್ಥದಲಿ ನಾಡು ಹೆರನಾಡಿನಲ್ಲಿ
ಎಲ್ಲೆಲ್ಲು ಎರಚಿಹೆವು ನಿಮ್ಮ ಸತ್ಯಾಂಶವನ್ನು.
ಗಾಳಿ ಸುಳಿವಲ್ಲೆಲ್ಲ ನಿಮ್ಮುಸಿರೆ ಕಮ್ಮುಸಿರು ಜೀವಸವ್ರ ನಮಗೆ
ಹಸುರ್ ಚಿಗುರು, ಹೂ, ಕಾಯಿ, ಹಣ್ಣು
ತಾಳು ತೆನೆ ಗೆಡ್ಡೆ ಗಳನು, ಕಾಳ್ ಕಬ್ಬು ಜೇನು ಮೇಸು
ಎಲ್ಲೆಲ್ಲು ಎಲ್ಲವೂ ತಿರುಳಿಟ್ಟು ಹೊರವಾಗುತಿರಲೆಂದು
ಕವಿಲೆಗಳ ಕೆಚ್ಚಲನು ತುಂಬಿ ಕಾನಲಿನ ಗರುಕೆ ಹೊನ್ನಾಗಿ
ಹಸುಮಕ್ಕಳೂಡುತಿಹ ತಾಯಹಾಲಾಗಿ
ಹೊಲಗದ್ದೆ ತೋಟಗಳ ತೆನೆಗೊನೆಗಳಾಗಿ
ಗೆಯ್ಮೆಗಳ ನಡಸಲಿಹ ಕೈಚಳಕವಾಗಿ

ಜಾನ್‌ಕಡಲು ಕಾಯುಲಿಕ ಕಲೆದಲ್ತ್ರಿಯಾಗಿ
ಯಂತ್ರಗಳ ಮಂತ್ರ ತಂತ್ರಗಳ ಬೆಳಸುಸೌಭಾಗ್ಯವಾಗಿ
ನೆಲ ನೀರು ಬಿಸಿ ಬಾನು ನಾಡಿಗೊಲಿವಂತೆ
ನಿಮ್ಮಂಶವೀನಾಡ ಜಾಗರಿಸುತಿರಲಿ
ಎಮ್ಮಾಸೆ ಫಲಿಸುವಂದದಲಿ ಎಮ್ಮ ಸಂತತಿಯ ಕಾಪಾಗಿ
ಇನ್ನೊಮ್ಮೆ ಭಾರತವು ಪರಿಶುದ್ಧವಪ್ಪಂತೆ
ಮುಗಿದ ಕೈ ತೆರೆದೆಮ್ಮ ಹರಸುತಿರಲಿ
ಹರಸುತ್ತಲಿರಲಿ ‖

# ಶ್ರೀ ಗೊಮ್ಮಟಜಿನ ಗಾಂಧಿ

ಜಿ. ಪಿ. ರಾಜರತ್ನಂ

ಧವಳಗಿರಿಸದೃಶಂ ದಿವಿಜನದಿಕಲ್ಪಂ
ವಿಶ್ವದೀ ಸದ್ಧರ್ಮಶೇಷತಲ್ಪಂ
ಮಂಡಿಸಿದರೆಸಿಬರೋ ಪರ್ಯಂಕವಿದರೊಳಾ
ವಿಷ್ಣ್ವಂಶ ಮಿಸುಗೆ ಆಫಾಲಗುಲ್ಫಂ

ರಾಮ ರಾಮಾನುಜರ್—ಆ ಭರತಲಕ್ಷ್ಮಣರ್
ವಾಯುಜವಿಭೀಷಣರ್ ಭೀಷ್ಮಕೃಷ್ಣಾರ್ಜುನರ್
ಬುದ್ಧ ಧರ್ಮಾಶೋಕ ಸಾಕ್ರಟಿಸ್ ಯೇಸು
ಇನಿಬರಿಂದೊಂದೊಂದು ಗುಣ ಓಸು ಓಸು
ಪಡೆದು, ಪಲವುಂ ಪಳವಪ್ಪಂತೆ ಸಾಗರಂ,
ಕೂಡಿ ದಶಶತಕಿರಣವಾ ಬೆಳಕಿನಾಗರಂ
ಆದಂತೆ, ಆದನಾ ನರವರಂ ಗಾಂಧಿ
ಆತನೇ ನೂತ್ನಭಾರತಕೆ ನಾಂದಿ.

ಅಸಮಯಶೋವಿತಾನಗುಣಮಿಲ್ಲದನಂ ಪ್ರಭುಮಾಡಿ ಪುಬ್ಬವಾ
ನಿಸರ ಪದಂಗಳಂ ಪುಗಿಸಿ ಪೋಲಿಪರೀತನುದಾತ್ತ ಪುಬ್ಬವಾ
ನಿಸರುಮನೊಳ್ಪಿನೊಳ್ ತಗುಳೆವಂದೊಡೆಯೀ ಪದದೊಳ್ ತಗುಳ್ಚಿ ಪೋ
ಲಿಸಲೆನಗಳ್ತಿಯಾದುದು ಜಿನೇಶ್ವರ ಗೋಮಟರೊಳ್ ಮಹಾತ್ಮರಂ.

ಅದೆಂತೆಂದೊಡೆ—

ವದನಂ ಚಂದ್ರಪ್ರಭಂ ವಿಕ್ರಮಭುಜಮಜಿತಂ ಪಾಣಿಪದ್ಮಪ್ರಭಂ ಸಂ
ಪದಮೆಂದುಂ ವರ್ಧಮಾನಂ ಗುಣತತಿ ವಿಮಲಂ ತನ್ನ ಪೆಂಪೊಂದನಂತಂ
ಹೃದಯಂ ಸ್ವಾಧೀನಧರ್ಮಂ ಮತಿ ಪುರುಚರಿತಂ ಸುವ್ರತಂ ಶೀತಲಂ ತಾ
ನದರಿಂ ಪ್ರತ್ಯಕ್ಷತೀರ್ಥೇಶ್ವರನೆನಿಸೆ ಸೆಗಳ್ದಂ ಗಾಂಧಿಯೆಂಬಾ ಮಹಾತ್ಮಂ.

ಮೞೆಗಂದುಂ ಕೋಡದುಗ್ರಾತಪಕೆ ಸೆಡೆಯದುದ್ಯದ್ಧಿ ಮಕ್ಕಳ್ಕದೋಱಂ
ತೊಲಸಿಂ ಸನ್ಮುಕ್ತಪೋಮಾರ್ಗದೊಳೊದವಿದವಂಗಕ್ಷಯಶ್ರೀ ಕರಂ ಕ್ಕೈ
ಯೊಳಪ್ಪಳ್ ತಪ್ಪಳಿಂದುರ್ವರೆಗಸುವಿಸುವಂತಾವಗಂ ತೋಱುವೀ ನಿ
ಶ್ಚಲಮೂರ್ತಿಶ್ರೀಯ ಸಾಮರ್ಥ್ಯಮನಱಿಮಱುಳರ್ ಬಲ್ಲರೇ ಗಾಂಧಿ ಬಾಪೂ

ಇಂತಪ್ಪ ಮೂರ್ತಿಗಳಂ ಕುರಿತು ಪೇಳ್ವರಾ ಬಲ್ಲರ್—

ಅತಿತುಂಗಾಕೃತಿಯಾದೊಡಾಗದದಱೊಳ್ ಸೌಂದರ್ಯಮೌನ್ನತ್ಯಮುಂ
ನುತಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗದೌನ್ನತ್ಯಮುಂ
ನುತಸೌಂದರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿ ನಿಂದಿರ್ದುವೇಂ
ಕ್ಷಿತಿಸಂಪೂಜ್ಯಮೊ ಗಾಂಧಿಮಾತ್ಮರ ಪರಶ್ರೀರೂಪಮಾತ್ಮೋಪಮಂ

ಏನೆನ್ನನ್ ಅನುಪಮನೀ ವಿಕ್ರಾಂತ ತುಂಗನ್ ?—

ನಮ್ಮದವಾಗಲಾಗ ಕೊಲೆಯುಂ ಪುಸಿಯುಂ ಕಳವುಂ ಪರಾಂಗನಾ
ಸಮ್ಮತಿಯುಂ ಪರಿಗ್ರಹದ ಕಾಂಕ್ಷೆಯುಂ ಮುಂಜಿವರಿಂದ ಮಾಡೊಡಂ
ದುಮ್ಮಸುಜಂಗಿಹತ್ರ್ಯಿಯ ಪರತ್ರ್ಯಿಯ ಕೇಡೆನುತುಂ ಮಹೋಚ್ಚದೊಳ್
ಗೊಮ್ಮಟಗಾಂಧಿಯಿರ್ದು ಸಲೆ ಸಾಱುವವೋಲೆಸೆದಿರ್ದನೀಕ್ಷಿಸೈ

ಇಂತಾತನಂ ನಾಂ ಬೇಡುವುದಿದೊಂದೆ—

ಅಸಮಬಲ ಭವದ್ವಿಕ್ರಮ
ಮುಸಂಭವಂ ಪೆರರ್ಗೆ ನಿನ್ನನಾನಿನಿತಂ ಪ್ರಾ
ರ್ಥಿಸುವೆಂ ಗಾಂಧೀ ನಿಜಸಾ
ಹಸೈಕದೇಶಾನುಸರಣ ಮೆಮಗಕ್ಕೆ ಗಡಾ

ಇಂತಿದು—

ಪಂಪನ ರನ್ನನ ವಾಕ್ಸ್ರ
ಗ್ಗುಂಫನಕಾ ನೇಮಿಚಂದ್ರ ಬೊಪ್ಪಣ ಮಧುರರ್
ಕಂಪುಗುಡಲ್ ಗಾಂಧಿಗೆ ನಿ
ಸ್ಕಂಪಂಗೀ ಆಯ್ದುಕೋದ ಮಾಲಾಬಂಧಂ

---

# ಸಭ್ಯತಾ ದೇವತೆ

ಕುವೆಂಪು

ಮನುಜರಲಿ ದೇವತ್ವದಾಕಾಂಕ್ಷೆ ಯಳಿದಿಲ್ಲ;
ಉಳಿದಿಹುದು; ದಿನದಿನಕೆ ಬೆಳೆಯುತಿದೆ: ಎಂಬುದಕೆ
ಸಾಕ್ಷಿಯಿದು: ದಶದಶ ಸಹಸ್ರ ಜನ ಕಿಕ್ಕಿರಿದು
ನೆರೆದಿಹುದು ಬಿಸಿಲಿನಲಿ ಮಾನವ ಮಹಾತ್ಮನಿಗೆ
ಗೌರವಾರಾಧನೆಯ ನೈವೇದ್ಯವನು ಸಲಿಸೆ!
ಇವನು ಕಲ್ಲನು ರೊಟ್ಟಿಮಾಡಿಲ್ಲ; ಹುಲ್ಲಿನಲಿ
ನಿಶಿತಾಸ್ತ್ರವನು ಮಂತ್ರದಿಂ ರಚಿಸಿ ದಾನವನ
ಕೊಂದಿಲ್ಲ; ಅರ್ಧನರ ಅರ್ಧಮೃಗ ರೂಪದಲಿ
ಕಂಭವನ್ನೊಡೆದು ಗುಡುಗುಡಿಸಿ ಮೂಡಿದನಿಲ್ಲ;
ದಶಶಿರನ ಕೊಂದಿಲ್ಲ; ಚಕ್ರಧರನೂ ಅಲ್ಲ.
ಅದ್ಭುತ ಪವಾಡಗಳ, ಅಘಟಿತ ವಿಚಿತ್ರಗಳ
ಗೋಜಿಗಿವನೆಂದಿಗೂ ಹೋಗುವಾತನೆ ಅಲ್ಲ!
ಮತ್ತಾವ ದೇವತ್ವದೀಕ್ಷಣೆಗೆ ನೆರೆದಿಹರ್
ಇನಿತು ಮನುವಂಶಜರ್? ನೋಡಲೆಂದೆಂಬೆಯೇನ್?
ಆನೆಯಂಬಾರಿಗಳ ರಾಜಶ್ರೈಸಿರಿಯಿಲ್ಲ;
ಇವನು ಸುಂದರನಲ್ಲ; ಯುವಕನಂತೂ ಅಲ್ಲ
ಮುದುಕನಾಗಿಹನು; ಹಲ್ಲುಗಳುದುರಿ ಬಾಯಿ ಬರಿ
ಬೋಡಾಗಿಹುದು; ಇವಗೆ ಚೆಂದುಟಿಯ ಚೆಲುವಿಲ್ಲ;
ಕಮಲಾಕ್ಷನಿವನಲ್ಲ. ಮತ್ತೇಕೆ? ಮೃದುಮಧುರ
ವಾಗ್ವಿಲಾಸಕೆ ಸೋತು ಎಂಬೆಯೇನ್? ಅದೂ ಸುಳ್ಳು!
ಇವನ ದನಿ ದೂರಕ್ಕೆ ಕೇಳಿಸದು; ಮಾತಿನಲಿ
ರಸಿಕತೆಯ ಬೆಡಗು ಬಿಂಕಗಳಿಲ್ಲ; ಓಜಸ್ಸು
ವಿನ್ಯಾಸ ವೈಖರಿಗಳಿನಿತಿಲ್ಲ; ವಿಷಯವೋ

ಬೀದಿ ಗುಡಿಸುವ ಜಾಡಮಾಲಿಗಳ ಕುರಿತದ್ದು !
ಹಿಮಗಿರಿಯ ಭವ್ಯ ಸೌಂದರ್ಯವನ್, ಗಗನವನೆ
ಚುಂಬಿಪ ತುಷಾರಮಯ ಗಿರಿ ಶಿರ ತರಂಗಗಳ
ರಮಣೀಯ ಕಮನೀಯ ಭೀಷ್ಮ ಸಂಮೋಹನವನ್
ಕುರಿತಿವನು ನುಡಿವನಲ್ಲ. ಅಥವಾ ಸಾಗರದ
ಸುಂದರ ಸುನೀಲ ಸಲಿಲದ ನೃತ್ಯ ಮಹಿಮೆಯನ್
ಮಾತಿನಲಿ ತೋರಲೆಳಸುವ ವಾಗ್ಮಿಯಿವನಲ್ಲ.
ಚೈತ್ರವೈಶಾಖಾದಿ ಮಾಸಗಳ, ಪುಷ್ಪಗಳ,
ಪಕ್ಷಿಗಳ, ತರು ಲತಾಗುಲ್ಮಗಳ, ಪರ್ಣಗಳ
ಕುರಿತು ಮಂಜುಳ ಶೈಲಿಯಲಿ ವರ್ಣಿಸುವ ಸರಸ
ಕಾವ್ಯರ್ಷಿಯಿವನಲ್ಲ. ಇವನು ಹೇಳುವ ವಿಷಯ,
ಇವನ ಮೇಣ್ ಇವನ ಮಾತಿನ ತೆರದಿ, ದಿನದಿನದ
ಸರಳ ಸಾಧಾರಣದ ಬಡಹೊಟ್ಟೆ ಪಾಡಿನದು !
ಆದರೂ ದರ್ಶನಕೆ ಮುತ್ತಿಹರು ಮಾನವರು,
ಜೇನುಹಲ್ಲೆಗೆ ಜೇನುಹುಳು ಕವಿಯುವಂದದಲಿ,
ಐಸಿರಿ ಮಹಾತ ವಾಗ್ಮಿತೆಗಳನು ಲೆಕ್ಕಿಸದೆ,
ಪ್ರೇಮ ಸತ್ಯಾಹಿಂಸೆ ಸಮತೆಗಳನಾಚರಿಸಿ,
ಬೋಧಿಸುವ, ಸಾಧಿಸುವ, ಜನರನೆಚ್ಚರಗೊಳಿಪ
ಸರಳ ಜೀವನದ ದೇವತ್ವದಾರಾಧನೆಗೆ !
ವೈಚಿತ್ರ್ಯವನೆ ದೇವರೆಂದೆಂಬುವಾ ಕಾಲ
ಬಂದಿತ್ತು. ಮತ್ಸ್ಯ ಕೂರ್ಮಾದಿ ನರಸಿಂಹರನು
ಭಯಭಕ್ತಿಯಿಂ ಪೂಜಿಸುವ ಕಾಲವೊಂದಿತ್ತು.
ರಾಜದರ್ಪದಲಿ, ಅಧಿಕಾರದಲಿ, ಕ್ರೌರ್ಯದಲಿ,
ಶಕ್ತಿ ಬಲ ಯುಕ್ತಿ ಸಿರಿ ಮೇಣ್ ಅಹಂಕಾರದಲಿ
ದೇವತ್ವವನು ಕಾಣುವಾ ಕಾಲವೊಂದಿತ್ತು.
ಆ ಅನಾಗರಿಕ ಮಾನವನ ದೇವಭಾವಗಳ್
ಇಂದು ದೂರಾಗುತಿವೆ. ಮಾನವನ ಅಭ್ಯುದಯ
ಶ್ರೇಯಸ್ಸುಗಳಿಗಾಗಿ ನೊಂದವರ್, ಬೆಂದವರ್,
ಮನುಜರಂತೆಯೆ ಬಾಳಿ ಹೋರಾಡಿ ಸಂದವರ್,
ರಾಜ್ಯಭೋಗತ್ಯಾಗದಮಲ ವೈರಾಗಿಗಳ್,

ಮನುಜ ತನುಜರ್ ಇಂದು, ಕ್ರಿಸ್ತ ಬುದ್ಧಾದಿಗಳ್,
ಮಾನವರ ಪೂಜೆ ಗೌರವಗಳನು ಕೈಕೊಳ್ವ
ದೇವತೆಗಳಾಗುವಾ ಕಾಲವೈತಂದಿಹುದು.
ಋಜುದೃಷ್ಟಿ ದೊರೆಕೊಳಲ್ ನೂರು ಯುಗಗಳ್ ಕಳೆದು
ಕಲಿಕಾಲ ಬೇಕಾಯ್ತು! ಧನ್ಯ ಕಲಿಯುಗ, ಧನ್ಯ!



# ಗಾಂಧೀಜಿ ಮತ್ತು ಹರಿಜನರು

ಆರ್. ಚೆನ್ನಿಗರಾಮಯ್ಯ

ಜಗದ್ವಂದ್ಯರೂ, ಭಾರತ ಭಾಗ್ಯವಿಧಾತರೂ, ಭಾರತ ಸ್ವಾತಂತ್ರ್ಯ ಸಾಧಕರೂ, ಹರಿಜನೋದ್ಧಾರಕರೂ ಆದ ಮಹಾತ್ಮ ಗಾಂಧೀಜಿಯವರ ೧೨೦ ನೇ ಜನ್ಮ ದಿನೋತ್ಸವದ ನಾಡಹಬ್ಬದ ಸುಸಮಯದಲ್ಲಿ ಮಹಾತ್ಮಾಜೀಯವರು ಹರಿಜನರ ಏಳಿಗೆಗಾಗಿ ಪಟ್ಟ ಶ್ರಮ, ಎಸಗಿದ ಕಾರ್ಯ, ಅನುಷ್ಠಾನಕ್ಕೆ ತರಲು ಪ್ರಯತ್ನಿಸಿದ ತತ್ವ ಸಾರಗಳನ್ನು ನೆನಪಿಗೆ ತಂದು, ಅವರು ಹರಿಜನರಿಗೆ ಸಲ್ಲಿಸಿರುವ ಸೇವೆಯನ್ನು ಸ್ಮರಿಸಬೇಕಾಗಿರುತ್ತದೆ. ಭಾರತದೇಶವು ಪರಕೀಯರ ಆಡಳಿತ ಪ್ರಭಾವಕ್ಕೆ ಸಿಲುಕಿ ಭಾರತೀಯರಲ್ಲಿ ಸುಪ್ತಾವಸ್ಥೆಯಲ್ಲಿದ್ದ ಜಾತಿ ಮತ ಭೇದ ಬೃಹದಾಕಾರವನ್ನು ತಾಳಿತು. ಹಿಂದೂಸಮಾಜದಲ್ಲಿ ಅತ್ಯಂತ ಕೀಳು ಮಟ್ಟದಲ್ಲುಳಿದ ಅಸ್ಪೃಶ್ಯರು, ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಪ್ರಪಂಚದಲ್ಲಿ ಸವರ್ಣ ಹಿಂದುಗಳ ಜತೆಯಲ್ಲಿ ಪೈಪೋಟಿ ನಡೆಸಲು ಅಶಕ್ತರಾಗಿ ಬಹಳ ಬಳಲಿದರು. ಸವರ್ಣ ಪಂಗಡದವರು ಕುರುಡುನಂಬಿಕೆಯಿಂದ ಹರಿಜನರನ್ನು ಹಿಂದೂಸಮಾಜದಿಂದ ದೂರವಿಡಲು ಪ್ರಯತ್ನ ಮಾಡುತ್ತಾ ಬಂದರು. ಸವರ್ಣ ಹಿಂದುಗಳ ಈ ಪ್ರತ್ಯೇಕ ಮನೋಭಾವನೆಗೆ ಪ್ರತ್ಯಕ್ಷವಾಗಿ ಸನಾತನಿಗಳಿಂದಲೂ, ಪರೋಕ್ಷವಾಗಿ ಪರಕೀಯ ಸರ್ಕಾರದಿಂದಲೂ ಪ್ರೋತ್ಸಾಹ, ಬೆಂಬಲ ದೊರಕಿತು. ಹಿಂದೂಸ್ಥಾನದಲ್ಲಿ ಕಳೆದ ಕಾಲು ಶತಮಾನಗಳಲ್ಲಿ ಜರುಗಿದ ರಾಜಕೀಯ, ಹಾಗೂ ಸಮಾಜಿಕ ಮಹತ್ವ ಘಟನೆಗಳನ್ನು ನೆನಪಿಗೆ ತಂದರೆ, ಆಡಳಿತಗಾರರೂ ಹಾಗೂ ಅವರ ಅನುಯಾಯಿಗಳು ಸ್ಪೃಶ್ಯ-ಅಸ್ಪೃಶ್ಯ ಭೇದಭಾವನೆಯನ್ನು ಯಾವ ಮಟ್ಟದ ವರೆಗೆ ಬೆಳೆಸಲು ಪ್ರಯತ್ನಪಟ್ಟರೆಂಬುವದು ಗೋಚರವಾಗುವುದು. ಈ ಶತಮಾನದ ಪ್ರಥಮ ಘಟ್ಟದಲ್ಲಿ ನಡೆದ ಭಾರತ ರಾಜಕೀಯ ಮಾರ್ಪಾಡಿನ ಸಂಬಂಧ ಚರ್ಚೆಗಳನ್ನೂ, ಸಮ್ಮೇಳನಗಳ ಕಾರ್ಯಕಲಾಪಗಳನ್ನೂ ಸ್ಥೂಲವಾಗಿ ವಿಮರ್ಶಿಸಿದರೆ ಸವರ್ಣ-ಹರಿಜನ ಭೇದಭಾವನೆಯನ್ನು ಹೆಚ್ಚಿಸಲು ನಡೆಸಿದ ಪ್ರಯತ್ನಗಳು ಸ್ಪಷ್ಟವಾಗುತ್ತವೆ.

ಮಹಾತ್ಮಾಜೀಯವರು ಭಾರತ ರಾಜಕೀಯ ಸೂತ್ರವನ್ನು ತಮ್ಮ ಕೈಗೆ ತೆಗೆದುಕೊಂಡನಂತರ ಹಿಂದೂಸಮಾಜದಲ್ಲಿ ಇದ್ದ ಅಸ್ಪೃಶ್ಯತೆಯೆಂಬ ಕಲಂಕ ವನ್ನು ನಿರ್ಮೂಲಮಾಡಲು ಪ್ರಯತ್ನ ಮಾಡಿದರು. ಹಿಂದೂಸಮಾಜ ಮುಂದುವರೆದು, ಹಿಂದೂಧರ್ಮ ಪ್ರಪಂಚದಲ್ಲಿ ಶ್ರೇಷ್ಠಧರ್ಮವೆಂದು ಮೆರೆಯಬೇಕಾದರೆ ಅಸ್ಪೃಶ್ಯತೆಯು ಮಾಯವಾಗಬೇಕೆಂದು ಜಗತ್ತಿಗೆ ಸಾರಿ ದರು. ಈ ತತ್ವಪ್ರಚಾರದಲ್ಲಿ ಸನಾತನಿಗಳು ಕಾಯಾ, ವಾಚಾ, ಮನಸಾ ತಮ್ಮನ್ನು ಎಷ್ಟೇ ವಿರೋಧಿಸಿದರೂ ಜಗ್ಗದೆ ಅಸ್ಪೃಶ್ಯತಾನಿವಾರಣೆಗಾಗಿ ಕಂಕಣ ತೊಟ್ಟರು. ಭಾರತ ಸ್ವಾತಂತ್ರ್ಯ ಸಂಪಾದಿಸಬೇಕಾದರೆ ಬಾಪೂಜೀ ಯವರು ದೇಶದ ಮುಂದೆ ಇಟ್ಟ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಅಸ್ಪೃಶ್ಯತಾನಿವಾರಣೆಗೆ ಪ್ರಥಮಸ್ಥಾನ ಕಲ್ಪಿಸಿಕೊಟ್ಟರು. ಹರಿಜನರ ಏಳಿಗೆಗಾಗಿ ನಿಧಿಸಂಗ್ರಹ ಮಾಡಲು ಪ್ರಾರಂಭಿಸಿದರು. ಸಮಾಜದ ಅಡ್ಡಿ, ಆತಂಕಗಳಿಗೆ ಸಿಲುಕಿ ಬಳಲುತ್ತಿರುವ ಹರಿಜನರ ಜೀವನ ಮಟ್ಟವನ್ನು ಹೆಚ್ಚಿಸಿ ಸವರ್ಣ ಹಿಂದುಗಳ ಅಂತಸ್ತಿಗೆ ಈ ದಲಿತವರ್ಗದವರನ್ನು ಏರಿಸಲು ಹರಿಜನ ಸೇವಾಸಂಘವನ್ನು ಸ್ಥಾಪನೆಮಾಡಿದರು. ಈ ಸಂಘದ ಶಾಖೆ ಗಳು ದೇಶಾದ್ಯಂತವೂ ಕೆಲಸಮಾಡುವಂತೆ ವ್ಯವಸ್ಥೆಮಾಡಿದರು. ಈ ಸಂಘ ಗಳ ಮೂಲಕ ಸಾಮಾಜಿಕ ರಂಗದಲ್ಲಿ ಹರಿಜನೋದ್ಧಾರ ಕಾರ್ಯವನ್ನು ಮಾಡುತ್ತಾ ಅಸ್ಪೃಶ್ಯತಾನಿವಾರಣೆಗೆ ರಾಜಕೀಯ ಬಣ್ಣವನ್ನು ಕೊಟ್ಟು, ಆ ಕ್ಷೇತ್ರದಲ್ಲಿಯೂ ಅಸ್ಪೃಶ್ಯತಾನಿವಾರಣೆಗಾಗಿ ರಾಷ್ಟ್ರಪ್ರೇಮಿಗಳು ದುಡಿಯುವಂತೆ ಮಾಡಿದರು. ಅಸ್ಪೃಶ್ಯತಾನಿವಾರಣಾ ಪವಿತ್ರಕೆಲಸದ ಜವಾಬ್ದಾರಿಯನ್ನು ಸಾಮಾಜಿಕ ಹಾಗೂ ರಾಜಕೀಯ ರಂಗದಲ್ಲಿ ದುಡಿಯು ತ್ತಿದ್ದ ಸವರ್ಣ ಹಿಂದುಗಳ ಮೇಲೆ ಹೇರಿದರು. ಮಹಾತ್ಮಾಜೀಯವರ ಆಣತಿ ಯಂತೆ ಹರಿಜನರ ಉದ್ಧಾರಕ್ಕಾಗಿ ಪ್ರಚಾರಕಾರ್ಯ ಬಿರುಸಾಗಿ ನಡೆಯು ತ್ತಿದ್ದ ಸಮಯದಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಂಟಕಪ್ರಾಯ ವಾಗುವಂತೆ ಬ್ರಿಟಿಷ್ ಸರ್ಕಾರದವರು ಹರಿಜನರ ಏಳಿಗೆಗಾಗಿ ವಿಶೇಷ ರಿಯಾಯಿತಿಗಳನ್ನು ರಾಜಕೀಯ ಕ್ಷೇತ್ರದಲ್ಲಿ ಕೊಡುವಂತೆ ಆಟಹೂಡಿ, ಹರಿಜನರಿಗೆ ಚುನಾವಣೆಗಳಲ್ಲಿ ಪ್ರತ್ಯೇಕ ಸ್ಥಾನಗಳನ್ನು ಮೀಸಲಾಗಿಡುವ ದಾಗಿಯೂ, ಆ ಸ್ಥಾನಗಳಿಗೆ ಚುನಾಯಿಸುವ ಹಕ್ಕು ಹರಿಜನ ಮತದಾರರಿಗೆ ಮಾತ್ರ ಇರುವುದಾಗಿಯೂ ಘೋಷಿಸಿದರು. ಒಂದು ಕಡೆ ಮಹಾತ್ಮಾ ಜೀಯವರ, ಅವರ ಅನುಯಾಯಿಗಳ ಸತತಪ್ರಯತ್ನದಿಂದ ಭೇದಭಾವನೆ ಕ್ರಮೇಣ ಮಾಯವಾಗುತ್ತಿದ್ದ ಸಮಯದಲ್ಲಿ ಆಡಳಿತಗಾರರ ಕೃತ್ರಿಮ

ಒಳಸಂಚಿನಿಂದ ಪ್ರತ್ಯೇಕ ಚುನಾವಣಾ ಸೌಕರ್ಯ ವಾಗ್ದಾನದಿಂದ ಹಿಂದೂ ಸಮಾಜದಲ್ಲಿ ಭಿನ್ನಭಾವ ಬೃಹದಾಕಾರವಾಗಿ ಬೆಳೆಯಲು ಅವಕಾಶವಾಯಿತು. ಹರಿಜನರ ಪೈಕಿ ಕೆಲಸವು ಸ್ವಾರ್ಥಿಗಳೂ, ಬ್ರಿಟಿಷ್ ಸರ್ಕಾರದ ಹಿಂಬಾಲಕರೂ ಈ ಅವಕಾಶವನ್ನು ದುರುಪಯೋಗಮಾಡಿ ಭೇದಭಾವವನ್ನು ಹೆಚ್ಚಿಸಲು ಪ್ರಯತ್ನಮಾಡಿದರು. ಈ ಸ್ವಾರ್ಥಿಗಳು ಹರಿಜನರು ಹಿಂದೂ ಸಮಾಜಕ್ಕೆ ಸೇರಿದವರಲ್ಲವೆಂದೂ, ಅವರದೇ ಬೇರೆ ಸಮಾಜವೆಂದೂ ಪ್ರಚಾರಮಾಡಲು ಪ್ರಾರಂಭಿಸಿದರು. ಇದರಿಂದ ಸ್ವಾತಂತ್ರ್ಯಪ್ರೇಮಿಗಳಿಗೆ ಸಿಡಿಲುಬಡಿದಂತಾಯಿತು. ಜನತೆ ದಿಕ್ಕು ಕಾಣದಂತಾಯಿತು. ಆಗ ಯರವಾಡಾ ಸೆರೆಮನೆಯಲ್ಲಿ ಬಂಧಿತರಾದ ಮಹಾತ್ಮಾಜೀಯವರಿಗೆ ಬ್ರಿಟಿಷ್ ಸರ್ಕಾರದವರು ಹೂಡಿದ ತಂತ್ರದಿಂದ ಮನನೊಂದಿತು. ಈ ತಂತ್ರವು ಕಾರ್ಯಗತವಾಗಲು ಅವಕಾಶ ಸಿಕ್ಕಿದ್ದೇ ಆದರೆ ಭಾರತ ಸ್ವಾತಂತ್ರ್ಯ ದುರ್ಲಭವೆಂದು ಮನಗಂಡರು. ಹರಿಜನರಿಗೆ ಪ್ರತ್ಯೇಕ ಚುನಾವಣೆಯನ್ನು ಕಲ್ಪಿಸಲಾಗದೆಂದೂ, ಸವರ್ಣ ಹಿಂದುಗಳ ಜತೆಗೆ ಅವರಿಗೆ ಜಂಟಿ ಚುನಾವಣಾಪದ್ಧತಿ ಏರ್ಪಾಡುಮಾಡಿ ಬೇಕಾದಲ್ಲಿ ಅವರಿಗೆ ಕೆಲವು ಸ್ಥಾನಗಳನ್ನು ಮೀಸಲಾಗಿಡಬಹುದೆಂದೂ ಬ್ರಿಟಿಷ್ ಸರ್ಕಾರಕ್ಕೆ ಮನವಿ ಮಾಡಿಕೊಂಡರು. ಅವರ ಮನವಿ ನಿರರ್ಥಕವಾಯಿತು. ಪ್ರತ್ಯೇಕ ಚುನಾವಣೆಯಿಂದ ಹಿಂದೂಸಮಾಜದ ಅಸ್ತಿತ್ವವು ನಾಶವಾಗುವುದಲ್ಲದೆ, ಭಾರತಸ್ವಾತಂತ್ರ್ಯ ಸಂಗ್ರಾಮಕ್ಕೆ ಅಪಘಾತವೊದಗುವುದೆಂಬ ಪೂರ್ಣಸಂಜಕೆಯಿಂದ ಬ್ರಿಟಿಷರ ಒಳಸಂಚನ್ನು ತಡೆಗಟ್ಟಿ, ಹಿಂದೂ ಸಮಾಜ, ಹಿಂದೂಧರ್ಮ ಹಾಗೂ ಭಾರತೀಯ ಸಂಸ್ಕೃತಿ ಉನ್ನತಿಗಾಗಿ ತಮ್ಮ ಕಡೆಯ ಅಹಿಂಸಾಮಹಾಸ್ತ್ರವನ್ನು ತೊಡಲು ನಿರ್ಧರಿಸಿದರು. ಹರಿಜನರನ್ನು ಹಿಂದೂ ಸಮಾಜದಲ್ಲಿ ಉಳಿಸಿಕೊಳ್ಳಲು ಕಠೋರವಾದ ಉಪವಾಸ ವ್ರತ ಪ್ರಾರಂಭಿಸಿದರು. ಭಾರತ ರಾಜಕೀಯ ಕ್ಷೇತ್ರದಲ್ಲಿ ನವಚೈತನ್ಯವುಂಟಾಯಿತು. ಭಾರತ ಪ್ರಜಾಸ್ತೋಮ ಮಹಾತ್ಮರ ಉಪವಾಸದಿಂದ ದಿಕ್ಕುಕಾಣದಾದರು. ಮಹಾತ್ಮರನ್ನು ಉಳಿಸಲು ಜನತೆ ಸರ್ವತ್ಯಾಗಮಾಡಲು ಸಿದ್ಧವಾಯಿತು. ದೇಶದಲ್ಲಿ ಅಹಿಂಸಾ ಕ್ರಾಂತಿ ತಲೆದೋರಿತು. ಹರಿಜನೋದ್ಧಾರದ ವಿಷಯದಲ್ಲಿ ಸವರ್ಣ ಹಿಂದುಗಳ ಮನಸ್ಸು ಪರಿವರ್ತನೆಯಾಯಿತು. ಎಷ್ಟೇ ತ್ಯಾಗವಾದರೂ ಲೆಕ್ಕಿಸದೆ ಹರಿಜನರನ್ನು ಹಿಂದೂ ಸಮಾಜದಲ್ಲಿ ಉಳಿಸಿಕೊಳ್ಳಲು ಇಡೀ ದೇಶವೇ ಸಾಹಸಮಾಡಿತು. ಮಹಾತ್ಮರ ಆಸೆ ಫಲಿಸಿತು. ಅವರ ಕೋರಿಕೆಗೆ ಮಾನ್ಯತೆ ದೊರಕಿತು. ಮಹಾತ್ಮಾ ಗಾಂಧೀಜಿಯವರು ಹರಿಜನೋದ್ಧಾರಕ್ಕಾಗಿ ತಮ್ಮ ಪ್ರಾಣವನ್ನು ತ್ಯಾಗಮಾಡಲು

ಸಿದ್ಧವಾದ ನಿದರ್ಶನಗಳು ಅವರ ಜೀವಿತಕಾಲದಲ್ಲಿ ಹಲವು ಸಾರಿ ಒದಗಿರುತ್ತವೆ. ಕೆಲವು ಸಾರಿ ಕೈಕೊಂಡ ನಿರಶನವ್ರತದಿಂದ ಜಗತ್ತಿನ ಇನ್ನಾವ ಮಹದ್ವ್ಯಕ್ತಿಯೂ ಸಾಧಿಸಲಾಗದ ಕಾರ್ಯವನ್ನು ಮಹಾತ್ಮಾಜೀಯವರು ಸಾಧಿಸಿದರು.

ಸತ್ಯ ಮತ್ತು ಅಹಿಂಸಾ ಮಾರ್ಗದಲ್ಲಿ ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಮಹಾತ್ಮಾಜೀ ಶ್ರಮಿಸಿದರು. ಅವರು ಈ ಕಾರ್ಯದಲ್ಲಿ ಯಾರನ್ನೂ ಒತ್ತಾಯಪಡಿಸಲಿಲ್ಲ; ನಿರ್ಬಂಧಪಡಿಸಲಿಲ್ಲ. ತಮ್ಮ ತತ್ವ ವಿರೋಧಿಗಳ ಮನಸ್ಸು ಪರಿವರ್ತನೆಗಾಗಿ ಅವರು ಹಿಂದೂ ಧರ್ಮದ ಸ್ವರೂಪವನ್ನು ತಮ್ಮದೇ ಆದ ನವೀನ ವಿಧಾನದಲ್ಲಿ ಪ್ರಚಾರಮಾಡಿದರು. ಹಿಂದೂ ಧರ್ಮವು ಸ್ವಯಂಪೂರ್ಣವಿರುವದು; ಅದರ ವಿಶಾಲ ಛತ್ರದ ಕೆಳಗೆ ಎಲ್ಲ ಧರ್ಮಗಳಿಗೂ ಸಂರಕ್ಷಣೆ ದೊರೆಯುವದು; ಹಿಂದೂ ಧರ್ಮವು ಇತರೇ ಧರ್ಮಗಳನ್ನು ಹೊರಚೆಲ್ಲುವದಿಲ್ಲ. ಜಗತ್ತಿನಲ್ಲಿಯ ಎಲ್ಲಾ ಧರ್ಮಸ್ಥಾಪಕರನ್ನು ಪೂಜಿಸಲು ಹಿಂದೂ ಧರ್ಮದಲ್ಲಿ ಎಡೆಯುಂಟು. ಪ್ರತಿಯೊಬ್ಬನೂ ತನ್ನ ಶ್ರದ್ಧೆಯಂತೆ ದೇವರನ್ನು ಪೂಜಿಸಬೇಕೆಂದು ಹಿಂದೂ ಧರ್ಮವು ಉಪದೇಶಿಸುವದು, ಹಾಗೂ ಎಲ್ಲಾ ಧರ್ಮಗಳೊಡನೆ ಶಾಂತಿ ಸಮಾಧಾನದಿಂದ ವ್ಯವಹರಿಸುವದು. ಕೇವಲ ಮಾನವರಷ್ಟೇ ಅಲ್ಲ, ಸಚೇತನ ಜೀವಮಾತ್ರಗಳೆಲ್ಲ ಒಂದೇ ಒಂದು ಜೀವನಸೂತ್ರದಿಂದ ಹೊಂದಿಕೊಂಡಿರುವವು. ಒಂದೇ ಉಗಮಸ್ಥಾನದಿಂದ ಆ ಉಗಮಸ್ಥಾನಕ್ಕೆ ನಾವು ದೇವರು, ಪರಮೇಶ್ವರ, ಅಲ್ಲಾ—ಹೀಗೆ ಯಾವ ಹೆಸರಿಟ್ಟರೂ ಸರಿ—ಎಲ್ಲ ಜೀವಿಗಳ ಉದ್ಭವವಿರುವದು ಎಂಬ ಶ್ರದ್ಧೆಯನ್ನು ಹಿಂದೂ ಧರ್ಮವು ಕಲಿಸುವದು. ಇದೇ ಹಿಂದೂ ಧರ್ಮದ ಎಲ್ಲಕ್ಕೂ ಹೆಚ್ಚಿನ ಬೆಲೆ ಬಾಳುವ ಗುಣವಿಶೇಷವು. ಇವೇ ಮಹಾತ್ಮಾಜೀಯವರು ಜಗತ್ತಿಗೆ ಸಾರಿದ ಹಿಂದೂ ಧರ್ಮ ತತ್ವದ ಸಾರ. ಮಹಾತ್ಮರು ಹಿಂದೂ ಧರ್ಮಕ್ಕೆ ಕೊಟ್ಟ ಹೊಸ ರೂಪಿನಿಂದ ಭಾರತೀಯರ ಮನಸ್ಸು ಪರಿವರ್ತನೆಯಾಯಿತು. ಅಸ್ಪೃಶ್ಯತೆಯು ಮಾನವನ ಹಾಗೂ ಸನಾತನಿಗಳ ಕೃತ್ರಿಮಸೃಷ್ಟಿಯೆಂದೂ, ಹರಿಜನರು ತಮ್ಮಂತೆಯೇ ಸೃಷ್ಟಿಕರ್ತನ ಮಕ್ಕಳೆಂದೂ, ಅವರೂ ಸಮಾಜದಲ್ಲಿ ಗಣ್ಯಸ್ಥಾನವನ್ನು ಪಡೆದು ಬಾಳಿ ಬದುಕಲು ಅರ್ಹರೆಂದೂ ಅಸಂಖ್ಯಾತ ಸವರ್ಣ ಹಿಂದುಗಳಿಗೆ ಜ್ಞಾನೋದಯವಾಯಿತು. ಹರಿಜನರೊಡನೆ ಕಲೆತು, ಅವರ ಕಷ್ಟಕಾಲದಲ್ಲಿ ನೆರವು ನೀಡಿ, ಹರಿಜನ ಬಂಧುಗಳ ಜೀವನಮಟ್ಟವೇರಿಸಲು ಪ್ರಯತ್ನಮಾಡಿದರು. ಈ ಕಾರ್ಯವು ಫಲಕಾರಿಯಾಗಲು ದೇಶದಲ್ಲಿ ಜನತೆಯ ಬೆಂಬಲ

ದೊರಕಿತು. ಅಲ್ಲದೆ ಮಹಾತ್ಮರ ಆಶೀರ್ವಾದಬಲದಿಂದ ಅಖಿಲಭಾರತ ಕಾಂಗ್ರೆಸ್ಸು ಪ್ರಾಂತಾಡಳಿತಾಧಿಕಾರವನ್ನು ವಹಿಸಿಕೊಂಡಿತು. ಜನತಾ ಪ್ರತಿನಿಧಿಗಳೂ, ರಾಷ್ಟ್ರಪ್ರೇಮಿಗಳೂ, ಗಾಂಧೀಜಿ ಅನುಯಾಯಿಗಳೂ ಆದ ಕಾಂಗ್ರೆಸ್ ಮಂತ್ರಿಮಂಡಲದವರು ಮಹಾತ್ಮರಿಗೆ ಅತ್ಯಂತ ಪ್ರಿಯವಾದ ಹರಿಜನೋದ್ಧಾರ ಕಾರ್ಯವನ್ನು ಅನುಷ್ಠಾನಕ್ಕೆ ತರಲು ವಿಶೇಷ ಪ್ರಯತ್ನಮಾಡಿದರು. ದೇವಾಲಯ, ಸಾರ್ವಜನಿಕ ಸ್ಥಳಗಳಿಗೆ ಹರಿಜನರು ಪ್ರವೇಶಮಾಡುವ ಹಕ್ಕನ್ನು ಶಾಸನಮೂಲಕ ಕಲ್ಪಿಸಿದರು. ಹರಿಜನ ಮಕ್ಕಳಿಗೆ ವಿದ್ಯಾಭ್ಯಾಸ ಕಲಿಸಲು ವಿಶೇಷ ಸೌಲಭ್ಯಗಳನ್ನು ಒದಗಿಸಿದರು. ಸರ್ಕಾರದ ಆಡಳಿತದಲ್ಲಿ ಹರಿಜನ ವಿದ್ಯಾವಂತರಿಗೆ ವಿಶೇಷವಾಗಿ ಸ್ಥಾನ ಕಲ್ಪಿಸಿಕೊಟ್ಟರು. ಯಾರು ಸಮಾಜದ ಅತಿ ಕೀಳುಮಟ್ಟದ ಸ್ಥಾನದಲ್ಲಿದ್ದರೋ ಆ ಹರಿಜನರನ್ನು ಮೇಲ್ಮಟ್ಟಕ್ಕೆ ತರಲು ಬಹಳ ಪ್ರಯತ್ನ ಮಾಡಿದರು. ಒಂದುಕಡೆ ಜನತೆಯಲ್ಲಿ ಹರಿಜನೋದ್ಧಾರದ ವಿಷಯದಲ್ಲಿ ಜಾಗೃತಿ ಮತ್ತು ಆಸಕ್ತಿ, ಇನ್ನೊಂದುಕಡೆ ಜನತೆಯ ಪ್ರತಿನಿಧಿಗಳಿಂದ ನಡೆಸಲ್ಪಟ್ಟ ಸರ್ಕಾರಗಳ ಪ್ರತ್ಯಕ್ಷ ಪ್ರೋತ್ಸಾಹ, ಬೆಂಬಲ ಇವುಗಳ ಪರಿಣಾಮವಾಗಿ ಅಸ್ಪೃಶ್ಯತಾನಿವಾರಣೆ ಕಾರ್ಯಕ್ರಮವು ಯಶಸ್ವಿಯಾಗಿ ನಡೆದು, ಹರಿಜನರು ಸಹ ಹಿಂದೂ ಸಮಾಜಕ್ಕೆ ಸೇರಿದವರು; ಅವರು ಉದ್ಧಾರವಾದರೆ ಹಿಂದೂ ಸಮಾಜ ಹಾಗೂ ಹಿಂದೂ ಧರ್ಮದ ಉದ್ಧಾರವೆಂಬ ಅರಿವು ಭಾರತಜನತೆಗೆ ಬಂದು ಹರಿಜನೋದ್ಧಾರ ತಮ್ಮ ಪವಿತ್ರ ಕರ್ತವ್ಯವೆಂಬ ಸಿದ್ಧಾಂತ ಫಲಿಸಿತು. ಹೀಗೆ ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರದಲ್ಲಿ ಮಾರ್ಪಾಡು ಆಯಿತು. ಮಹಾತ್ಮರ ಆಶೀರ್ವಾದಬಲದಿಂದಲೂ, ಭಾರತಜನತೆಯ ತ್ಯಾಗದಿಂದಲೂ ಭಾರತದೇಶ ಸ್ವತಂತ್ರವಾದ ಮೇಲೆ ಹರಿಜನರ ಉದ್ಧಾರಕ್ಕಾಗಿ ಜನತೆ ಹಾಗೂ ಸರ್ಕಾರ ವಿಶೇಷ ಗಮನಕೊಟ್ಟಿತು. ಹರಿಜನಪ್ರತಿನಿಧಿಗಳು ಕೇಂದ್ರ ಹಾಗೂ ಪ್ರಾಂತೀಯ ಸರ್ಕಾರಗಳಲ್ಲಿ ಮಂತ್ರಿಸಂಸ್ಥಾನಗಳನ್ನಲಂಕರಿಸಿ ಹರಿಜನರ ಸಾಮಾಜಿಕ ಹಾಗೂ ಆರ್ಥಿಕ ಏಳಿಗೆಗಾಗಿ ಕೈಕೊಳ್ಳಬೇಕಾಗಿರುವ ಕಾರ್ಯಕ್ರಮಗಳನ್ನು ಇತರ ಮಂತ್ರಿಗಳ ಸಹಾಯ ಸಹಾನುಭೂತಿ ಪಡೆದು ಅನುಷ್ಠಾನಕ್ಕೆ ತಂದರು. ಹರಿಜನರ ಜೀವನಮಟ್ಟವನ್ನು ಹೆಚ್ಚಿಸಿ, ಅವರು ಇತರ ಮಾನವರಂತೆ ಸಮೃದ್ಧಿ ಮತ್ತು ಸುಖಶಾಂತಿಯಿಂದ ಬಾಳಲು ಅವರಿಗೆ ಒದಗಿಸಬೇಕಾಗಿರುವ ಸೌಕರ್ಯ ಸೌಲಭ್ಯಗಳನ್ನೆಲ್ಲಾ ಒದಗಿಸಲು ಪ್ರಯತ್ನ ಮಾಡಿದರು ಮತ್ತು ಈಗಲೂ ಮಾಡುತ್ತಿದ್ದಾರೆ. ಈ ಹೊಸ ಸನ್ನಿವೇಶಕ್ಕೆ ಮಹಾತ್ಮಾಜೀಯವರ ಸತತ ಪ್ರಯತ್ನವೇ ಕಾರಣವೆಂದರೆ ಅತಿಶಯೋಕ್ತಿ

ಯಾಗಲಾರದು. ಅವರ ದೃಢನಿಶ್ಚಯ, ಮನೋಸಂಕಲ್ಪ, ಕಾರ್ಯತತ್ಪರತೆಯಿಂದಲೇ ನಾವು ಮುಂದುವರಿದಿರುವದು. ಮಹಾತ್ಮರು ಹರಿಜನರ ವಿಷಯದಲ್ಲಿ ಪಟ್ಟ ಅಭಿಪ್ರಾಯವನ್ನು ನಾವು ಈಗ ಸ್ಮರಿಸಿಕೊಂಡರೆ ಅವರು ಹರಿಜನರಿಗೆ ಯಾವ ರೀತಿಯಲ್ಲಿ ಸೇವೆ ಸಲ್ಲಿಸಿರುತ್ತಾರೆಂಬುದು ವೇದ್ಯವಾಗುತ್ತದೆ.

ಯಾವ ಮಹಾವ್ಯಕ್ತಿಯು, ಅವತಾರಪುರುಷನು ಹರಿಜನರಿಗೆ ಬಾಪೂಜೀ ಆಗಿದ್ದರೋ ಆ ವಿಭೂತಿ ಪುರುಷರ ನಶ್ವರದೇಹ ಇಹಲೋಕ ತ್ಯಜಿಸಿತು. ಕೋಟ್ಯಾಂತರ ಹರಿಜನರು ಅನಾಥರಾದರು. ಆದರೆ ಮಹಾತ್ಮರ ದಿವ್ಯಜ್ಯೋತಿ, ಅವರು ಬೆಳಗಿದ ನಂದಾದೀಪಿಗೆ ಇನ್ನೂ ಪ್ರಕಾಶಮಾನವಾಗಿ ಬೆಳಗಿ ನಮ್ಮೆಲ್ಲರಿಗೂ ಮಾರ್ಗದರ್ಶಕವಾಗಿರುತ್ತದೆ. ಮಹಾತ್ಮರು ಹಾಕಿಕೊಟ್ಟ ಸನ್ಮಾರ್ಗದಲ್ಲಿ ನಡೆದು ಲೋಕಕಲ್ಯಾಣ ಸಾಧಿಸುವುದೇ ಇಂದು ಗಾಂಧೀಜಿಯ ಆತ್ಮಕ್ಕೆ ಶಾಂತಿ ತೋರಬೇಕಾದ ಯುಕ್ತಮಾರ್ಗ. ಗಾಂಧೀಜಿ ಹಚ್ಚಿದ ಶಾಂತಿಯ ನಂದಾದೀವಿಗೆ ಚಿರಕಾಲ ಬಾಳಿ ಪ್ರಪಂಚದಲ್ಲಿ ಚಿರಶಾಂತಿ ನೆಲೆಸುವಂತೆ ಮಾಡುವ ಜವಾಬ್ದಾರಿ ನಮ್ಮ ಮೇಲೆ ಬಿದ್ದಿರುತ್ತದೆ. ಗಾಂಧೀಜಿಯವರು ಯಾವ ತತ್ತ್ವಗಳನ್ನು ಬೋಧಿಸಿ ನಮ್ಮಲ್ಲಿ ನೆಲೆಸಿರುವರೋ ಆ ಮಹಾ ತತ್ತ್ವಗಳನ್ನು ನಾವು ಅನುಷ್ಠಾನಕ್ಕೆ ತರಬೇಕು. ಭಾರತೀಯರಾದ ನಾವು ಕಾಯಾ, ವಾಚಾ, ಮನಸಾ ಅನುಸರಿಸಿ ಅಶಾಂತಿ ಮಡುವಿನಲ್ಲಿರುವ ಜಗತ್ತಿಗೆ ಶಾಂತಿನಂದಾದೀವಿಗೆ ಹಿಡಿದು ಮಾರ್ಗದರ್ಶಿಗಳಾಗಬೇಕು. ಹಿಂಸೆ, ಅಸತ್ಯ, ದ್ವೇಷಾಸೂಯೆಗಳ ಬದಲು ಅಹಿಂಸೆ, ಸತ್ಯಪ್ರೇಮಗಳು ಮಾನವರಲ್ಲಿ ಬೇರೂರುವಂತೆ ಮಾಡುವ ಶ್ರೇಷ್ಠಕಾರ್ಯದ ಹೊಣೆ ನಮ್ಮ ಮೇಲಿದೆ. ಈ ಮಹಾತ್ಕಾರ್ಯವನ್ನು ಸಾಧಿಸಿ ಮಾನವಕಲ್ಯಾಣಕ್ಕಾಗಿ ಜಗತ್ತಿನಲ್ಲಿ ಶಾಂತಿ ನೆಲಸಿದರೆ ಆಗ ಬಾಪೂಜಿಯ ಆತ್ಮಕ್ಕೆ ಶಾಂತಿ ದೊರಕೀತು. ಮಹಾತ್ಮರು ಅಮರರಾದರು. ಅವರು ಸಾರಿರುವ ತತ್ತ್ವಗಳನ್ನು ಶಾಶ್ವತಗೊಳಿಸಲು, ಜನಜೀವನದಲ್ಲಿ ಅನುಷ್ಠಾನಕ್ಕೆ ತರಲು ನಾವೆಲ್ಲರೂ ದುಡಿಯೋಣ. ಮಹಾತ್ಮರ ದೂತರಾಗಿ ಈ ಪವಿತ್ರ ಕೆಲಸವನ್ನೂ ಕೈಕೊಳ್ಳೋಣ.

ಜೈ ಹಿಂದ್

# ಗಾಂಧಿಜಿಯವರು ಮತ್ತು ಹರಿಜನೋದ್ಧಾರ

ನಿಟ್ಟೂರು ಶ್ರೀನಿವಾಸರಾವ್

ಗಾಂಧಿಜಿಯವರಿಗಿಂತ ಮುಂಚೆಯೇ ಹರಿಜನರ ಉದ್ಧಾರಕಾರ್ಯದಲ್ಲಿ ತೊಡಗಿದ ಹಲವು ಮಹಾಪುರುಷರಿದ್ದರೂ ಪರಿಣಾಮಕಾರಿಯಾದ ಕೆಲಸ ನಡೆಯಲು ಮೊದಲಾದುದು ಗಾಂಧಿಯವರಿಂದಲೇ ಎಂದು ಧೈರ್ಯವಾಗಿ ಹೇಳಬಹುದು. ಇಂದು ಹರಿಜನರನ್ನು ಸರಿಸಮಾನರಾಗಿ ಕಾಣಬೇಕೆಂಬ ತತ್ತ್ವ ಎಲ್ಲರಿಗೂ ಗ್ರಾಹ್ಯವಾಗಿ ತೋರುತ್ತಿದೆ. ಆದರೆ ಈಗ ಕೇವಲ ೨೦-೨೫ ವರುಷಗಳ ಹಿಂದೆ ಪರಿಸ್ಥಿತಿ ಹೀಗಿರಲಿಲ್ಲ. ಕಾಲಾನುಕ್ರಮದಿಂದ ಗಾಂಧಿಜಿಯವರ ಪ್ರಯತ್ನ ಫಲವಾಗಿ ಬಹುಮಟ್ಟಿಗೆ ಎಲ್ಲರ ಮನಸ್ಸೂ ಪರಿವರ್ತನೆಯಾಗಿ ಅವರುಗಳ ಮನೋವೃತ್ತಿಯೇ ಶಾಂತಿಯ ಕ್ರಾಂತಿಯಾಗಿ, ಅಸ್ಪೃಶ್ಯತೆಯ ಅಸ್ತಿಭಾರವೇ ಅಲುಗಿಹೋಗಿದೆ. ಈ ಸಾಧನೆಯ ಪ್ರಮಾಣವನ್ನು ಅಳೆಯುವುದು ಸುಲಭವಲ್ಲ. ಸಾವಿರಾರು ಸಾಮಾನ್ಯರು ಹತ್ತಾರು ತಲೆಮಾರುಗಳಲ್ಲಿ ಸಾಧಿಸಲು ಶಕ್ಯವಾಗದುದನ್ನು ಗಾಂಧಿಜಿಯವರು ತಮ್ಮ ಪ್ರತಿಭೆಯಿಂದ ಹತ್ತಿಪ್ಪತ್ತು ವರುಷಗಳಲ್ಲಿ ಗಳಿಸಿದ್ದಾರೆ.

ಅಸ್ಪೃಶ್ಯತಾನಿವಾರಣೆ, ಗಾಂಧಿಜಿಯವರ ಕಾರ್ಯಕ್ರಮದಲ್ಲಿ ಕೇವಲ ಒಂದು ಅಂಶವೆಂದು ಭಾವಿಸಿದರೆ ತಪ್ಪಾಗುವುದು. ಅದು ಅವರ ನೈಜ ಸ್ವಭಾವ. ಗಾಂಧಿಜಿಯವರು ಯಾವ ಮತದ, ಧರ್ಮದ ನಿಯಮಗಳನ್ನೂ ಅಂಧಶ್ರದ್ಧೆಯಿಂದ ಒಪ್ಪುವವರಲ್ಲ. ಅಂತಹ ಪ್ರತಿಯೊಂದು ನಿಯಮವನ್ನೂ ಅವರು ಪರೀಕ್ಷಿಸಿ, ಅದು ತೇರ್ಗಡೆಯಾದರೆ ಮಾತ್ರ ಪಾಲಿಸಲು ಅರ್ಹವಾದುದೆಂದು ಪದೇಪದೆ ಹೇಳಿದ್ದಾರೆ. ಯಾವರೀತಿಯಿಂದ ನೋಡಿದರೂ ಅಸ್ಪೃಶ್ಯತೆಗೆ ಸಮರ್ಥನೆ ದೊರೆಯದೆಂಬುದು ಅವರ ಅಭಿಪ್ರಾಯ. "ಅಸ್ಪೃಶ್ಯತೆಯಿಂದ ಅಸ್ಪೃಶ್ಯರೆನ್ನಿಸಿಕೊಳ್ಳುವವರಿಗೂ, ಅದಕ್ಕಿಂತ ಹೆಚ್ಚಾಗಿ ಹಿಂದೂ ಸಮಾಜಕ್ಕೂ ಹಾನಿಯೊದಗಿದೆ. ಅದನ್ನು ನಿರ್ಮೂಲಮಾಡದಿದ್ದರೆ ಅದು ಉಲ್ಬಣವಾಗಿ ಹಿಂದೂ ಸಮಾಜವನ್ನೇ ನಾಶಮಾಡಿಬಿಡುತ್ತದೆ. ಈ ಅಧರ್ಮವನ್ನು ತೊಡೆದು



‘ದೀನರ, ದಲಿತರ ಸೇವಕ’ ನಾನು ಎನ್ನುತ್ತ ಬಾಪೂಜಿಯವರು ಸಂಕಟಕ್ಕೊಳಗಾದವರಿಗೆ ಸದಾಕಾಲ ನೆರವು ನೀಡುತ್ತಿದ್ದರು. ಕುಷ್ಠರೋಗಿಗಳ ಶಿಬಿರವೊಂದಕ್ಕೆ ಅವರು ಭೇಟಿ ಕೊಡುತ್ತಿರುವುದನ್ನು ಮೇಲಿನ ಚಿತ್ರದಲ್ಲಿ ಕಾಣಬಹುದು.

ಹಾಕುವ ವರೆಗೆ ನಮಗೆ ಮೋಕ್ಷವಿಲ್ಲ" ಹೀಗೆ ಗಾಂಧಿ ಅಸ್ಪೃಶ್ಯತಾ ನಿವಾರಣೆಗೆ ಕಂಕಣಬದ್ಧರಾದರು.

ತಾವು ಆಚರಣೆಗೆ ತರದ ಯಾವ ತತ್ತ್ವವನ್ನೂ ಗಾಂಧಿ ಸಾರುತ್ತಿರಲಿಲ್ಲ ವೆಂದು ಹೇಳಬೇಕಾದುದಿಲ್ಲ. ಈ ಉದ್ಯಮವನ್ನು ಕುರಿತ ಅವರ ಪ್ರಯತ್ನಗಳು, ಪ್ರಯೋಗಗಳು ಎಲ್ಲರಿಗೂ ಗೊತ್ತೇ ಇವೆ. ಅವರು ಸಾಬರ್ಮತಿಯಲ್ಲಿ ಸತ್ಯಾಗ್ರಹ ಆಶ್ರಮವನ್ನು ಸ್ಥಾಪಿಸಿದಾಗ, ಅವಕಾಶ ದೊರೆತೊಡನೆಯೇ ಯಾರಾದರೂ ಯೋಗ್ಯರಾದ ಅಂತ್ಯಜರು ಬರುವಂತಿದ್ದರೆ ಅವರನ್ನು ಆಶ್ರಮಕ್ಕೆ ಸೇರಿಸುವದೆಂದು ನಿರ್ಧರಮಾಡಿದ್ದರು. ಇದಕ್ಕೆ ಸಿದ್ಧರಾಗುವುದರೊಳಗಾಗಿಯೇ ಅಂತ್ಯಜರ ಒಂದು ಕುಟುಂಬವೇ ಆಶ್ರಮವನ್ನು ಸೇರಲು ಬಯಸಿತು. ಗಾಂಧಿ ಯವರು ಅವರನ್ನು ಆದರದಿಂದ ಸೇರಿಸಿಕೊಂಡರು. ಆದರಿಂದ ಪ್ರಾರಂಭದಲ್ಲಿ ಉಂಟಾದ ಗಲಿಬಿಲಿ, ಆಶ್ರಮದ ಒಳ ಆಡಳಿತದಲ್ಲಿ ಉದ್ಭವಿಸಿದ ಸಮಸ್ಯೆಗಳು, ಹೊರಗಿನ ಧನಸಹಾಯ ಏಕಾ ಏಕಿ ನಿಂತುದು—ಇವನ್ನೆಲ್ಲಾ ಗಾಂಧಿಜಿ ತಮ್ಮ ಆತ್ಮಕಥೆಯಲ್ಲಿ ವರ್ಣಿಸಿದ್ದಾರೆ. ಈ ಕುಟುಂಬದವರು ಕಡೆಯುವರೆಗೆ ಗಾಂಧಿಯವರ ಆಶ್ರಮದಲ್ಲಿಯೇ ಇದ್ದುದೂ, ಅವರ ಮಗಳಾದ ಲಕ್ಷ್ಮಿ ಯನ್ನು ಗಾಂಧಿ ತಮ್ಮ ಮಗಳಂತೆ ಕಾಣುತ್ತಿದ್ದುದೂ, ಅವಳಿಗೆ ಮದುವೆ ಮಾಡಿ ಅನಂತರ ಆಕೆಯ ಮರಣದ ದುಃಖವನ್ನೂ ಸಹ ಅನುಭವಿಸಿದುದೂ ಎಲ್ಲರಿಗೂ ತಿಳಿದ ವಿಷಯ.

ದೇವಾಲಯುಗಳು ಹಿಂದೂಧರ್ಮದ ಕೇಂದ್ರಗಳು. ದೇವರ ಸನ್ನಿಧಿಗೆ ಹರಿಜನರನ್ನು ಬಿಡದಿರುವುದು ದೇವರಿಗೇ ಅಪರಾಧವೆಂದು ಗಾಂಧಿ ಭಾವಿಸಿ ದ್ದರು. ಹರಿಜನರಿಗೆ ಪ್ರವೇಶವಿಲ್ಲದ ದೇವಾಲಯಕ್ಕೆ ತಾವು ಹೋಗುವುದಿಲ್ಲ ವೆಂದು ಗಾಂಧಿಜಿ ಪ್ರತಿಜ್ಞೆಮಾಡಿದುದೂ, ಜಗನ್ನಾಥ ದೇವಾಲಯಕ್ಕೆ ಮಹದೇವ ದೇಸಾಯಿ ಹೋದುದರಿಂದ ಗಾಂಧಿಯವರು ಅವರನ್ನು ದಂಡಿಸಿ ದುದೂ ಈ ಸಂದರ್ಭದಲ್ಲಿ ಸ್ಮರಿಸತಕ್ಕುದಾಗಿದೆ. ಹರಿಜನರ ದೇವಾಲಯ ಪ್ರವೇಶದ ಚಳುವಳಿ ಜಯಪ್ರದವಾಗಿ ಎಲ್ಲಾ ಪ್ರಾಂತಗಳಲ್ಲೂ ಕಾಯಿದೆಗಳ ನಿರ್ಮಾಣವಾದುದೂ ಗಾಂಧಿಯವರ ಪ್ರಭಾವದಿಂದಲೇ.

ಹಿಂದೂ ಸಮಾಜದ ಈ ಹುಳುಕನ್ನು ಉಪಯೋಗಿಸಿಕೊಳ್ಳಲು ಬ್ರಿಟಿಷ್ ಸಾಮ್ರಾಜ್ಯಶಾಹಿ ಪ್ರಯತ್ನಪಟ್ಟು ಅದರ ಉದ್ದೇಶ ಗಾಂಧಿಜಿಯವರ ಪ್ರತಿಜ್ಞಾಪಾಲನೆಯಿಂದ ನಿಷ್ಫಲವಾದುದು ಇತಿಹಾಸದ ಸಂಗತಿಯಾಗಿದೆ. ಗಾಂಧಿಜಿಯವರು ಕಾಂಗ್ರೆಸ್ಸಿನ ಏಕೈಕ ಪ್ರತಿನಿಧಿಯಾಗಿ ಎರಡನೆಯ ರೌಂಡ್ ಟೇಬಲ್ ಸಮ್ಮೇಳನಕ್ಕೆ ಹೋದುದು ಸರಿಯಷ್ಟೆ. ಅಲ್ಲಿ ಬ್ರಿಟನ್ನಿನ ಪ್ರತಿನಿಧಿ

ಗಳೂ ನಮ್ಮ ದೇಶದ ಪ್ರತಿಗಾಮಿಗಳೂ ಹರಿಜನರಿಗೆ ಪ್ರತ್ಯೇಕ ಚುನಾವಣಾ ಪದ್ಧತಿಯೇ ಸರಿಯಾದುದೆಂದು ಪ್ರತಿಪಾದಿಸ ತೊಡಗಿದರು. ಗಾಂಧಿಜಿಯವರು ಆ ಸೂಚನೆಯ ಒಳ ಅರ್ಥವನ್ನು ಬಯಲುಮಾಡಿ "ಅಸ್ಪೃಶ್ಯರೆನ್ನಿಸಿಕೊಳ್ಳುವವರು ಹಿಂದೂ ಸಮಾಜದಿಂದ ಅವಿಭಾಜ್ಯ. ಅವರಿಗೆ ಪ್ರತ್ಯೇಕ ಚುನಾವಣೆಯನ್ನು ಏರ್ಪಡಿಸಿದರೆ ಒಂದು ದೇಹವನ್ನು ತುಂಡುಮಾಡಿದಂತೆ. ನನ್ನ ಪ್ರಾಣವನ್ನಾದರೂ ಬಲಿಕೊಟ್ಟು ಈ ದುಷ್ಟ ಪ್ರಯತ್ನವನ್ನು ಇದುರಿಸುವೆನು" ಎಂದು ಘೋಷಿಸಿದರು. ಆ ಸಮ್ಮೇಳನದಿಂದ ಹಿಂದಿರುಗಿದ ಸ್ವಲ್ಪ ಕಾಲದಲ್ಲಿಯೇ ಅವರನ್ನು ಸೆರೆಯಲ್ಲಿಟ್ಟರು. ಅನಂತರ ಬ್ರಿಟಿಷ್ ಮುಖ್ಯ ಮಂತ್ರಿಯ ಪಂಚಾಯ್ತಿಯ ಮೇಲೆ ಹರಿಜನರಿಗೆ ಬೇರೆ ಚುನಾವಣೆ ಎಂದು ಗೊತ್ತಾಯಿತು. ಇದು ತಿಳಿದ ಕೂಡಲೇ ಸೆರೆಮನೆಯಲ್ಲಿದ್ದ ಗಾಂಧಿ ತಮ್ಮ ಘೋಷಣೆಯನ್ನು ಬ್ರಿಟಿಷ್ ಸರ್ಕಾರದ ನೆನಪಿಗೆ ತಂದರು. ಸರ್ಕಾರ ಅದನ್ನು ಲಕ್ಷಿಸಲಿಲ್ಲ. ಗಾಂಧಿಜಿಯವರು ಸಮ್ಮೇಳನದಲ್ಲಿ ಉಪಯೋಗಿಸಿದುದು ಉತ್ಪ್ರೇಕ್ಷೆಯ ಭಾಷೆಯೆಂದು ಸರ್ಕಾರ ಭಾವಿಸಿತು. ಆದರೆ ಗಾಂಧಿಜಿಯವರು ಎಂದೂ ಉತ್ಪ್ರೇಕ್ಷೆಯ ಮಾತುಗಳನ್ನಾಡುವವರಲ್ಲ. ಅವರು ತಮ್ಮ ಪ್ರತಿಜ್ಞೆಯನ್ನು ಪಾಲಿಸತೊಡಗಿ ಆಮರಣಾಂತ ಉಪವಾಸವನ್ನು ಕೈಗೊಂಡರು. ಇದು ಪೂನಾ ಒಪ್ಪಂದದಲ್ಲಿ ಕೊನೆಗಂಡು, ರಾಜಕಾರಣದಲ್ಲೂ ಹರಿಜನರು ಹಿಂದೂ ಸಮಾಜದ ಅಂಗವಾಗಿಯೇ ಉಳಿದರು.

ಹರಿಜನರನ್ನು ಸಮಾನರನ್ನಾಗಿ ಕಾಣುವುದು ಉಳಿದ ಹಿಂದುಗಳಿಗೆ ಹೇಗೆ ಕರ್ತವ್ಯವೋ, ಹಾಗೆ ತಮ್ಮ ಆಚಾರ ವ್ಯವಹಾರದಲ್ಲಿ ಸರ್ವತೋಮುಖವಾದ ಸುಧಾರಣೆಯನ್ನು ಮಾಡಿಕೊಂಡು ಆತ್ಮಾವಲಂಬನೆ ಆತ್ಮಾಭಿಮಾನವನ್ನು ಗಳಿಸುವುದು ಹರಿಜನರ ಕರ್ತವ್ಯವೆಂದು ಗಾಂಧಿಜಿಯವರು ಸದಾ ಸಾರುತ್ತಿದ್ದರು.

ಹಿಂದೂ ಸಮಾಜವು ಹರಿಜನರಿಗೆ ಎಸಗಿರುವ ಅನ್ಯಾಯವು ಎಷ್ಟರ ಮಟ್ಟಿಗೆ ಗಾಂಧಿಜಿಯವರ ಮನಸ್ಸನ್ನು ಕೊರೆಯುತ್ತಿತ್ತು, ಮತ್ತು ಹರಿಜನರನ್ನು ಕುರಿತು ಅವರ ಅನುಕಂಪ ಎಷ್ಟು ಆಳವಾಗಿತ್ತು ಎಂಬುದು ಅವರ ಹಾರೈಕೆಯಿಂದ ಮಂದಟ್ಟಾಗುತ್ತದೆ. "ನಾನು ಸಾರ್ಥಕವಾದ ಜೀವನವನ್ನು ನಡೆಸಿದ್ದರೆ ನನಗೆ ಪುನರ್ಜನ್ಮವಿಲ್ಲ. ಒಂದುವೇಳೆ ನಾನು ಪುನಃ ಹುಟ್ಟುವುದಾದರೆ, ಹರಿಜನನಾಗಿ ಹುಟ್ಟಬೇಕೆಂಬುದೇ ನನ್ನ ಬಯಕೆ" ಎಂದರವರು. ಹರಿಜನ ಎಂದರೆ ಭಗವಂತನ ಪ್ರಿಯ ಎಂದು ಅರ್ಥ. 'ಹರಿಜನ' ಎನ್ನಿಸಿಕೊಳ್ಳಲು ಗಾಂಧಿಜಿಯವರಿಗಿಂತ ಹೆಚ್ಚು ಅರ್ಹರು ಯಾರು?

ಇಂದು ನಾವು ಗಾಂಧಿಜಿಯವರಿಗೆ ಕಾಣಿಕೆಯರ್ಪಿಸುತ್ತಿದ್ದೇವೆ. ಅವರು ಎಲ್ಲಾ ಕಾಣಿಕೆಯನ್ನೂ ಮೀರಿದವರು. ಅವರು ತೋರಿಸಿದ ಮಾರ್ಗವನ್ನು ಬುದ್ಧಿಪೂರ್ವಕವಾಗಿ ತ್ರಿಕರಣ ಶುದ್ಧಿಯಿಂದ ಅನುಸರಿಸುವುದಕ್ಕಿಂತ ಹೆಚ್ಚಿನ ಕಾಣಿಕೆ ಯಾವುದು? ಹರಿಜನಸೇವೆ ಅವರಿಗೆ ಅತ್ಯಂತ ಪ್ರಿಯವಾಗಿತ್ತು. ಆ ಕಾರ್ಯವನ್ನು ನಾವು ಹರಿಜನರಿಗೆ ಉಪಕಾರ ಮಾಡುತ್ತಿದ್ದೇವೆ ಎಂಬ ಅಹಂಕಾರವನ್ನಿಟ್ಟುಕೊಳ್ಳದೆ ನಮ್ರತೆಯಿಂದ ನಿರಭಿಮಾನದಿಂದ ಮುಂದುವರಿಸಿ ಗಾಂಧಿಜಿಯನ್ನು ಪಡೆದ ಆದರ್ಶಭಾಗ್ಯವನ್ನು ಸಾರ್ಥಕಗೊಳಿಸೋಣ.



# ON MINORITIES

By Mahomood Sheriffe

The problem of the minorities has long remained the subject matter of a bitter controversy. So much has been said and written about it and so many arguments advanced for and against it, that any authoritative answer to this vexed problem is almost an impossibility. The problem has not been limited to any particular country though due to local conditions obtaining in certain places, it may not have assumed serious proportions. Minorities, as such, have existed all through the ages, their treatment with a view to a satisfactory adjustment in the body politic having always engaged the attention of political thinkers. In modern times, however, the problem has assumed a greater prominence on account of new political trends and a wave of democratic sentiments sweeping over the civilized world. The racial minorities in America and the national minorities in the Eastern Europe are a few instances on the point, each, having necessitated the intervention of the League of Nations to safeguard their right through international guarantees. Nearer home, the existence of a heterogenous group of people, inhabiting our vast subcontinent with varying and distinct degrees of culture, gave rise to a state of affairs which, to say the least, was disquieting and proved a source of anxiety to our thinkers. The Round Table Conference represented by the tallest amongst the leaders of all communities and consisting of the best brain of the country, bears a testimony to the complexity of the problem and shows how it defied solution. The various conventions held from time to time and agreement arrived at, to come to a satisfactory understanding proved unfruitful, till at last a portion of the population regarding themselves as an exclusive and in assimilable group sought a separate homeland where they thought they would be in a more homely atmosphere. Now the question is as to what contribution did Gandhiji make to the solution of the problem and what was his method of approach to it. Cast as he was in nature's largest mould,

possessed of a vision which few could excel, and actuated with highest ideals, he dealt with it in his characteristically simple manner. He was positively reckless with goodwill towards the world and no spite or ill-will, no baser consideration ever characterised his actions. He felt that negotiations, involving as they did a bargaining spirit, were not the background against which the question could be viewed. He looked at it with a higher angle of vision and was for conceding to the minorities the maximum that they demanded, even erring on the side of generosity. He sincerely believed that no state could thrive unless its minorities, differing widely in race, language, political and social traditions, were generously treated so as to give them a sense of security. His political philosophy; based as it was on truth, non-violence and love towards all, did not admit of any higgle-haggle. It was this spirit of expansiveness that made him agree to give the Muslims, a blank cheque at the Round Table Conference, for them to safeguard any guarantees they deemed necessary. Similar was the case in his treatment of the Harijans whose neglect by society all through the ages and the consequent degradation in all walks of life evoked in him the most generous response and the efforts made by him to place them on a higher pedestal, have placed the country under a deep debt of gratitude. The same breadth of vision and generous deal was displayed towards other minorities and had the effect of disarming suspicion and accounted for softening down the rigour of their demand. Mahatmaji's solicitude to stand by the minorities was most markedly exemplified by his mission at Noakhali, Bihar and the Punjab, where the aftermath of partition had wrought an irreparable damage. The loss of life and property, the wholesale transplantation of entire populations, the uprooting of families from their paternal homes, the snapping of the ties which were of the most sacrosanct character are some of its painful features. There have been wholesale substitution of people in certain areas, history providing examples of this even in recent years. Greeko-Turkish agreement effected in the wake of the treaty of Severes is still fresh in our minds. But no country, specially in recent years, has witnessed such a deplorable state of affairs. It was least expected in India, which has always occupied a proud place in the matter of its moral and spiritual heritage and has led the way in higher ethical principles. What effect this should have made on the mind of Mahatmaji and how it must have

wrung his heart to its very depth, is not difficult to imagine. That this should have happened at a time when after years of trouble and tribulation, and centuries of untold hardships, the country achieved freedom and secured an honoured place in the comity of nations, was a sad experience to all the lovers of the country, specially to one who had toiled hard for it and to whose wisdom, courage, foresight, vision and leadership, this consummation was due. No wonder therefore that Mahatmaji was not inclined to participate in the celebration of independence on the 15th August, 1947, in spite of repeated importunities of us, the members of the Constituent Assembly, at Delhi. While the whole of India was celebrating the memorable event with an exuberance of joy which knew no bounds, Mahatmaji was busy wiping out the tears of the minorities at Bihar and other places and by walks undertaken in that period of age and by vigilance and prayers and fasting and with almost hourly contact with the sufferers, he was assuaging the grief of those who had fallen a victim to the communal vandalism. This affords an instance of the nobility of a soul which cannot be judged by ordinary standards. Well may H. G. Wells say that Mahatmaji was a super-man. Had nature been kinder to us, had his life been spared a few more years, had not the assassin's hand snatched away a life from us so usefully and nobly spent in the service of the motherland, many of the grave problems facing India including that of the minorities would have found an easier solution. A friend, philosopher and guide that he was, his services would have been invaluable specially in the formative period of a country which has just seen the dawn of freedom. The closing period of his life which was spent in Delhi, produced an immense good inasmuch as it unravelled many knotty and intricate problems including the one which is the subject of this talk. His immediate presence at a place which had witnessed and was witnessing scenes of the most fratricidal enmity, the open-day stabbings, the use of places of worship for purposes which they were not intended for, the indiscriminate pillage and looting, to quote a few examples, gave a quietus and changed the mental outlook of the people. It did so in the same manner as in Bengal where lately his magic presence had cemented the bonds of friendship which had latterly snapped. A further lease of life, at least for a few more years would have resulted in a permanent understanding between India and Pakistan, the two neighbouring countries

with similarities too marked and numerous to make mention of, whose reciprocal help and co-operation is so essential for peace and prosperity.

Now that the old order has changed yielding place to a new one and circumstances have considerably altered, cannot our dealings of the minorities be revised and we take cue from what Mahatmaji did and felt in the matter? I do see that under the new constitutional set-up and the change over that has come from the political standpoint new circumstances have arisen and the problem has assumed a new form on. The formation of a nation is in the offing and it is expected that all communities making up this composite nation will adjust their differences and in future display a spirit of common and national consciousness. Those who were standing apart have to compose their differences and stand together, knit up like comrades and a common culture should be evolved which would be neither Hindu nor Muslim but Indian. Till this synthesis will take shape, it is necessary that India being what it is and the minorities continuing as they will for some good time to come, these differences cannot be overlooked. The minorities apprehend that thrown as they are in the midst of a people who are by far numerically superior will be swamped and their culture, language, traditions and social institutions will be given a set-back to. To disarm this suspicion and to see that a sense of security prevails, it is for the major communities to display a spirit of goodwill and toleration. This spirit should not be for the sake of only outward display effected as a matter of expediency, but should rest on true affection and regard. A formal manifestation unattended with genuine desire to implement their professions will not receive a satisfactory response. Their safeguards should be enshrined in the shape of guarantees in the Constitution itself, but I make bold to say that even these guarantees will not be of any avail unless the heart is touched and a sincere desire to fraternise is wanting. Being in a position of vantage numerically, materially and otherwise, they should regard this as a subject matter of trust to be treated with justice and fairplay. In this matter we should follow the foot-steps of that great saint who has laid down that a good government is reflected in the happiness and well-being of the minorities. The minorities also should remember that aloofness and the complex that was perhaps the marked feature in their relations with others should be left off and they should regard

the newly found freedom with pride and regard this country as their own to be lived and died for and look to the newly found freedom with the greatest pride. The artificial and arbitrary distinctions which unfortunately have been dividing one from the other should be obliterated giving place to something real and permanent. It is only this outlook and spirit of adjustment that will bring about peace and prosperity into this land and the problem of minorities will solve by itself. India has now found itself, with illimitable possibilities of advancement that are before it, the vast and untold moral and material resources and with a spiritual heritage, all its own, it is bound to play a leading role in days to come. Let us all, whether belonging to the minorities or majorities, act in unison and irrespective of caste, creed or colour, work together for the glory of this ancient land.



# ಗ್ರಾಮಾಭಿವೃದ್ಧಿ ಕುರಿತು ಗಾಂಧೀಜಿ

ಟಿ. ಮರಿಯಪ್ಪ

ಗಾಂಧೀಜಿಯವರು ಸತ್ತೂ ಅಮರರಾಗಿದ್ದಾರೆ. ದೇಶದ ತಂದೆಯಾದ ಅವರು, ರಾಜಕೀಯ ಸ್ವಾತಂತ್ರ್ಯದ ಜತೆಗೆ ಆರ್ಥಿಕ ಸ್ವಾತಂತ್ರ್ಯಕ್ಕೂ ಹೋರಾಡಿದ್ದಾರೆ. ರಾಜಕೀಯ ಹೋರಾಟಕ್ಕೆ ಸತ್ಯ ಮತ್ತು ಅಹಿಂಸಾ ಶಸ್ತ್ರಗಳನ್ನು ಅಣಿಮಾಡಿದರು; ಆರ್ಥಿಕ ಸ್ವಾತಂತ್ರ್ಯಕ್ಕಾಗಿ ರಚನಾತ್ಮಕ ಕಾರ್ಯಕ್ರಮಗಳನ್ನು ವಿಧಾಯಕಮಾಡಿದರು. ಹೋರಾಟದಲ್ಲಿ ನೊಂದು ಬಳಲಿದ ಜನತೆಯನ್ನು ರಚನಾತ್ಮಕ ಕಾರ್ಯಕ್ರಮಗಳಿಂದ ಹುರುಪುಗೊಳಿಸಿದರು. ಈ ರೀತಿ ಗಾಂಧೀಜಿಯವರು ದೇಶದ ಜನತೆಯನ್ನು ಮುಂದೊಯ್ದು ಸ್ವಾತಂತ್ರ್ಯಕ್ಕೆ ಸಿದ್ಧಮಾಡಿ ಸ್ವಾತಂತ್ರ್ಯವನ್ನು ಸಂಪಾದಿಸಿಕೊಟ್ಟರು. ಜನತೆಯ ದೌರ್ಬಲ್ಯದಿಂದ ರಚನಾತ್ಮಕ ಕಾರ್ಯಕ್ರಮಗಳು ಅವರು ನಿರೀಕ್ಷಿಸಿದ ಮಟ್ಟಕ್ಕೆ ಏರಲಿಲ್ಲ. ಆದಕ್ಕಾಗಿ ಇಂದು ನಾವು ಕಷ್ಟಗಳನ್ನನುಭವಿಸುತ್ತಿದ್ದೇವೆ. ಸ್ವಾತಂತ್ರ್ಯ ಬಂದರೂ, ಜನತೆ ಕಷ್ಟದಲ್ಲಿ ಬಳಲುತ್ತಿದೆ. ಅವರು ದೇಶದ ಮುಂದಿಟ್ಟ ರಚನಾತ್ಮಕ ಕಾರ್ಯಕ್ರಮಗಳನ್ನು ನಾವು ಆಸಕ್ತಿಯಿಂದ ಅನುಷ್ಠಾನಕ್ಕೆ ತಂದಿದ್ದರೆ, ಈಗ ನಮಗೆ ಒದಗಿರುವ ಆಹಾರ ಮತ್ತು ಉಪಯುಕ್ತ ಸಾಮಾನುಗಳ ಅಭಾವವೇ ಇರುತ್ತಿರಲಿಲ್ಲ.

ಗಾಂಧೀಜಿ ಹೇಗೆ ರಾಜಕೀಯವೇತ್ತರೋ ಹಾಗೆ ಆರ್ಥಿಕ ನಿಪುಣರೂ ಆಗಿದ್ದರು. ಅವರ ದೃಷ್ಟಿಯಲ್ಲಿ ಸ್ವಾತಂತ್ರ್ಯ ಸಾಧನ ಮಾತ್ರ. ಜನತೆಯ ಬಡತನವೆಲ್ಲವೂ ನಿರ್ಮೂಲವಾಗಲು ಸಂಪೂರ್ಣ ಆರ್ಥಿಕ ಉನ್ನತಿಯಾಗಬೇಕೆಂದು ಸಾರಿ ಸಾರಿ ಹೇಳಿದರು. ಐಶ್ವರ್ಯವಂತರು ಮತ್ತು ಬಡವರಿಗಿರುವ ಅಂತರ ಹೋದಹೊರತು ಶಾಂತಿಯನ್ನು ಕಾಪಾಡಿಕೊಂಡು ಬರುವುದು ಕಷ್ಟಸಾಧ್ಯವೆಂದರು. ಆದರೆ ಬಲಾತ್ಕಾರದಿಂದ ಈ ಅಂತರವನ್ನು ಕಡಮೆಮಾಡುವುದು ಸರಿಯಲ್ಲ. ಐಶ್ವರ್ಯವಂತರು ಸ್ವಯಂಪ್ರೇರೇಪಣೆಯಿಂದ ತಮ್ಮ ಐಶ್ವರ್ಯಕ್ಕೆ ಧರ್ಮದರ್ಶಿಗಳಾಗಬೇಕೆಂದು ಹೇಳಿದ್ದಾರೆ. ಗಾಂಧೀಜಿಗಿಂತ ಶ್ರೇಷ್ಠವಾದ ಸಮತಾವಾದಿಯಾಗಲೀ ಸಮಾಜವಾದಿಯಾಗಲೀ ಬೇರೊಬ್ಬನಿಲ್ಲ.

ಭಾರತ ಹಳ್ಳಿಗಳ ನಾಡು; ಶೇಕಡಾ ಲಃ ರಷ್ಟು ಜನ ಹಳ್ಳಿಗಳಲ್ಲಿಯೇ ವಾಸಮಾಡುತ್ತಾರೆ. ಅವರ ಮುಖ್ಯ ಕಸಬು ವ್ಯವಸಾಯ ಮತ್ತು ಪಶು ಪಾಲನೆ. ಇಂದು ದುಃಸ್ಥಿತಿಯಲ್ಲಿರುವ ಹಳ್ಳಿಗಳು ಬ್ರಿಟಿಷರ ಆಳ್ವಿಕೆಗೆ ಮೊದಲು ಉಚ್ಛ್ರಾಯಸ್ಥಿತಿಯಲ್ಲಿದ್ದವು. ಹಳ್ಳಿಗರು ಪ್ರಾಮಾಣಿಕತೆಯಿಂದಲೂ, ಸರಳತೆಯಿಂದಲೂ ತಮ್ಮ ಜೀವನವನ್ನು ನಡೆಸುತ್ತಿದ್ದರು. ಆಗಿನ ಕಾಲದ ಹಳ್ಳಿಗಳ ರಚನೆಯನ್ನು ಅನೇಕರು ಮುಕ್ತಕಂಠದಿಂದ ಹೊಗಳಿದ್ದಾರೆ. ಹಳ್ಳಿಗಳು ಸ್ವಪರಿಪೂರ್ಣತೆಯಿಂದ ಕೂಡಿದ ತುಂಬುಜೀವನಕ್ಕೆ ಆಶ್ರಯ ಗಳಾಗಿದ್ದುವು. ದೇಶದಲ್ಲಿ ಯುದ್ಧವಾಗಲೀ, ಆಕ್ರಮಣವಾಗಲೀ ಆದರೂ, ಹಳ್ಳಿಯ ಜೀವನ ಎಂದಿನಂತೆ ಸಾಗುತ್ತಿತ್ತು. ರಾಜ ಯಾರೇ ಆಗಲಿ ಹಳ್ಳಿಯ ಆಯುಕಟ್ಟಿನಲ್ಲಿ ಬದಲಾವಣೆಯಾಗುತ್ತಿರಲಿಲ್ಲ. ಹಳ್ಳಿಗಳು ಸಂಪೂರ್ಣ ಸ್ವಾತಂತ್ರ್ಯದಿಂದ ತಮ್ಮ ಕೆಲಸಕಾರ್ಯಗಳನ್ನು ನಡಿಸಿಕೊಂಡೇ ಬರು ತ್ತಿದ್ದುವು. ಆ ವ್ಯವಸ್ಥೆ ಅಷ್ಟು ಚೆನ್ನಾಗಿದ್ದಿತು. ತಮಗೆ ಬೇಕಾದ ಆಹಾರ ಮತ್ತು ಉಪಯುಕ್ತ ವಸ್ತುಗಳನ್ನು ತಾವೇ ತಯಾರುಮಾಡಿಕೊಳ್ಳುತ್ತಿದ್ದರು. ಜ್ಞಾನಾಭಿವೃದ್ಧಿಗೂ ತಕ್ಕ ಏರ್ಪಾಟಿತ್ತು.

ಬ್ರಿಟಿಷರ ಆಳ್ವಿಕೆಯ ದುಷ್ಪರಿಣಾಮದಿಂದ ಗ್ರಾಮಗಳಲ್ಲಿದ್ದ ಒಳಾಡಳಿತ ಸ್ವಾತಂತ್ರ್ಯ ಹೋಗಿ ಹಳ್ಳಿಗಳು ಕ್ಷೀಣವಾಗುತ್ತಿವೆ. ತುಂಬುಜೀವನ ಮಾಯ ವಾಗಿದೆ. ಗ್ರಾಮಕೈಗಾರಿಕೆಗಳು ಕ್ಷೀಣಿಸುತ್ತಿವೆ. ಬಡತನ ತಲೆದೋರಿ ಜನರು ನರಳುತ್ತಿದ್ದಾರೆ. ಹಳ್ಳಿಗಳಲ್ಲಿ ಜೀವನ ಸಾಗದಂತಾಗಿ, ಹಳ್ಳಿಗರು ಪಟ್ಟಣಗಳಿಗೆ ಮತ್ತು ಕೈಗಾರಿಕಾಕೇಂದ್ರಗಳಿಗೆ ಹೋಗುತ್ತಿದ್ದಾರೆ. ಹೀಗಾಗಿ ದೇಶದ ನಾಡಿಯಾದ ಹಳ್ಳಿಗಳು ಕಂಗೆಟ್ಟಿವೆ. ಹಳ್ಳಿಗಳ ಉದ್ಧಾರವೇ ಗಾಂಧೀಜಿಯವರ ರಚನಾತ್ಮಕ ಕಾರ್ಯಗಳ ಮುಖ್ಯಗುರಿ. ಗಾಂಧೀಜಿ ದಕ್ಷಿಣ ಆಫ್ರಿಕ ಫೋನಿಕ್ಸ್ ಆಶ್ರಮದಲ್ಲಿಯೂ, ಭಾರತದಲ್ಲಿನ ಸಾಬರಮತಿ ಮತ್ತು ಸೇವಾಗ್ರಾಮದ ಆಶ್ರಮಗಳಲ್ಲಿಯೂ ಆದರ್ಶವಾದ ಹಳ್ಳಿಯ ಜೀವನವನ್ನು ನಡೆಸಿಕೊಂಡು ಬಂದರು.

ಹೆಚ್ಚು ಜನಸಂಖೆ ಇರುವ ಮತ್ತು ವ್ಯವಸಾಯವೇ ಪ್ರಧಾನವಾದ ನಮ್ಮ ದೇಶದಲ್ಲಿ ಪಾಶ್ಚಿಮಾತ್ಯರ ಅಂಧಾನುಕರಣ ಅನವಶ್ಯಕವೆಂದು ಸಾರಿದ್ದಾರೆ. ಗಾಂಧೀಜಿ ಯಂತ್ರೋಪಕರಣಗಳನ್ನು ವಿರೋಧಿಸದಿದ್ದರೂ ಯಂತ್ರೋಪಕರಣಗಳಿಂದುಂಟಾಗುವ ನಿರುದ್ಯೋಗ ಮತ್ತು ಇತರ ದುಷ್ಪರಿ ಣಾಮಗಳನ್ನು ವಿರೋಧಿಸಿದ್ದಾರೆ. ಅವರ ಮುಖ್ಯಗುರಿ ಜನರಿಗೆ ಸರಳ ಜೀವನ ಕಲ್ಪಿಸಬೇಕೆಂಬುದೇ! ದೈವದತ್ತವಾದ ಕೈಕಾಲು ಮೊದಲಾದ

ಅಂಗಗಳನ್ನು ಉಪಯೋಗಿಸಿ ಎಲ್ಲರೂ ಯಾವಾಗಲೂ ಯಾವುದಾದರೊಂದು ರಚನಾತ್ಮಕ ಕಾರ್ಯದಲ್ಲಿ ತೊಡಗಿರಬೇಕೆಂಬುದೇ ಆಗಿತ್ತು. ಸಹಸ್ರಾರು ಜನರು ನಿರುದ್ಯೋಗಿಗಳಾಗಿ, ದೇಶದ ಆರ್ಥಿಕ ಉತ್ಪನ್ನ ಕಡಮೆಯಾದರೆ, ಸಮಾಜಭದ್ರತೆ ಸಡಿಲವಾಗುವುದನ್ನು ಮನಗಂಡಿದ್ದರು. ಅವರ ಆರ್ಥಿಕ ಯೋಜನೆ ಅಹಿಂಸಾತತ್ತ್ವದ ಮೇಲೆ ರಚನೆಯಾಗಿದೆ. ಹಿಂಸೆಯಿಂದ ಸಾಧಿಸಿದ ಯಾವ ಕಾರ್ಯವೂ ಉತ್ತರೋತ್ತರ ಯಶಸ್ವಿಯಾಗುವುದಿಲ್ಲವೆಂದು ಅವರ ಅಭಿಮತ. ಈ ದೃಷ್ಟಿಯಿಂದ ಗ್ರಾಮಾಭಿವೃದ್ಧಿಗಾಗಿ ವಿಶೇಷವಾಗಿ ಶ್ರಮಪಟ್ಟಿದ್ದಾರೆ. ಹಳ್ಳಿಗಳು ತಮ್ಮ ಮೊದಲಿನ ಉಚ್ಛ್ರಾಯ ಸ್ಥಿತಿಗೆ ಬರಬೇಕಾದರೆ ಅಧಿಕಾರಗಳ ವಿಕೇಂದ್ರೀಕರಣ, ಸರಳತೆ ಮತ್ತು ಗ್ರಾಮಕೈಗಾರಿಕೆಗಳ ಜೀರ್ಣೋದ್ಧಾರ ಅವಶ್ಯಕ. ಅದಕ್ಕಾಗಿ ಖಾದೀ ಕೈಗಾರಿಕೆಯನ್ನು ಮತ್ತೆ ಸ್ಥಾಪಿಸಿದರು. ಲಕ್ಷಾಂತರ ಜನರು ಈ ಕೈಗಾರಿಕೆಯಿಂದ ಜೀವನ ಸಾಗಿಸುತ್ತಿದ್ದಾರೆ. ಅವರಿಗೆ ಜೀವನಯಾತ್ರೆ ಸುಗಮವಾಗಬೇಕಾದರೆ ಅವರು ತಯಾರಿಸಿದ ಬಟ್ಟೆ ಸರಿಯಾಗಿ ಮಾರಾಟವಾಗಬೇಕು. ಮಿಲ್ಲಿನ ಬಟ್ಟೆಗಿಂತ ಖಾದಿ ಶ್ರೇಷ್ಠವೆಂಬುದು ಉಪಚಾರದ ಮಾತಲ್ಲ. ಖಾದಿಯಲ್ಲಿ ಮಾನವನ ಕೌಶಲ್ಯವನ್ನು ಕಾಣಬಹುದು; ಹಾಗೆಯೇ ಇತರ ಗ್ರಾಮಕೈಗಾರಿಕೆಗಳು. ಅವರು ಸ್ಥಾಪಿಸಿದ ಚರಕಾಸಂಘ, ಗ್ರಾಮೋದ್ಯೋಗಸಂಘ ಹಳ್ಳಿಗಳ ಉದ್ಧಾರಕ್ಕೆ ಸಹಾಯಕವಾಗಿವೆ.

ಪಟ್ಟಣಗಳಿಗಿಂತಲೂ ಹಳ್ಳಿಗಳಲ್ಲಿ ಅಸ್ಪೃಶ್ಯತೆ ಹೆಚ್ಚಾಗಿ ಕಂಡುಬರುತ್ತಿತ್ತು. ಹಳ್ಳಿಗಳ ಉದ್ಧಾರಕ್ಕೂ ಅವುಗಳ ಆರ್ಥಿಕರಚನೆಗೂ ಬಹು ಸಹಾಯಕರಾದ ಹರಿಜನರ ಉದ್ಧಾರ ಗ್ರಾಮೋದ್ಧಾರಕ್ಕೆ ಬಹಳ ಅವಶ್ಯಕ. ಹರಿಜನಸಂಘವನ್ನು ಸ್ಥಾಪಿಸಿ ತೀವ್ರ ಪ್ರಚಾರವನ್ನೂ ನಡೆಸಿದರು. ಇಂದು ಅವರ ಶ್ರಮ ಫಲಕಾರಿಯಾಗುತ್ತಿದೆ. ನಮ್ಮ ಸಮಾಜದಲ್ಲಿ ಈಗಾಗುತ್ತಿರುವ ಕ್ರಾಂತಿಯು ಜಗತ್ತಿನ ಇತಿಹಾಸದಲ್ಲಿ ಎಂದೂ ಆಗಿರಲಿಲ್ಲ.

ಪಾಶ್ಚಿಮಾತ್ಯ ವಿದ್ಯಾಭ್ಯಾಸ ಪದ್ಧತಿಯಿಂದ ಜನತೆಯ ಅವಿದ್ಯತೆಯನ್ನು ಹೋಗಲಾಡಿಸಲು ಬಹಳಕಾಲ ಬೇಕಾಗಬಹುದೆಂದು ಬಾಪೂಜಿಯವರು ಮನಗಂಡು ನಮ್ಮ ದೇಶದ ಸಂಸ್ಕೃತಿ ಮತ್ತು ಸನ್ನಿವೇಶಕ್ಕೆ ತಕ್ಕಂತೆ ವಾರ್ಧಾ ಶಿಕ್ಷಣಯೋಜನೆಯನ್ನು ದೇಶದ ಮುಂದಿಟ್ಟಿದ್ದಾರೆ. ಯಾವುದಾದರೂ ಕಸುಬಿನ ಮೂಲಕ ಪಡೆಯುವ ಜ್ಞಾನವೇ ಶ್ರೇಷ್ಠವೆಂದು ಸಾರಿದ್ದಾರೆ. ಅಗಾಧ ಬಡತನದಲ್ಲಿ ನರಳುತ್ತಿರುವ ಜನರ ವಿದ್ಯಾಭ್ಯಾಸಕ್ಕಾಗಿ ಹೆಚ್ಚು ಹಣ ಒದಗಿಸಲು ಸರ್ಕಾರಗಳು ಅಸಮರ್ಥವಾಗುತ್ತವೆಂದು ಮನಗಂಡು ಈ ಶಿಕ್ಷಣ

ವನ್ನು ಜಾರಿಗೆ ತರಬೇಕೆಂದರು. ಈ ಶಿಕ್ಷಣದಲ್ಲಿ ಮನುಷ್ಯನ ಎಲ್ಲಾ ಗುಣಗಳೂ ವಿಕಸಿತವಾಗುವುದಲ್ಲದೆ, ಮನುಷ್ಯನು ಸ್ವಾವಲಂಬಿಯಾಗುತ್ತಾನೆ. ವಿದ್ಯಾಭ್ಯಾಸದ ಖರ್ಚಿನ ಸ್ವಲ್ಪಭಾಗವಾದರೂ ಉತ್ಪತ್ತಿಯಾಗುತ್ತದೆ. ಗ್ರಾಮಜೀವನಕ್ಕೆ ಅವಶ್ಯಕವಾದ ಕೈಗಾರಿಕೆಗಳನ್ನು ಮಕ್ಕಳಿಗೆ ಕಲಿಸಲು ಈ ಯೋಜನೆಯಿಂದ ಸಂಪೂರ್ಣ ಅವಕಾಶವಿದೆ.

ವ್ಯವಸಾಯಾಭಿವೃದ್ಧಿಗೂ, ಪಶುಪಾಲನಾಭಿವೃದ್ಧಿಗೂ ಅನೇಕ ಉಪಯುಕ್ತ ಸಲಹೆಗಳನ್ನು ನೀಡಿದ್ದಾರೆ. ತಮ್ಮ ಆಶ್ರಮಗಳಲ್ಲಿ ಪ್ರಯೋಗ ನಡೆಸಿ ಮೇಲ್ಪಂಕ್ತಿ ಹಾಕಿದ್ದಾರೆ. ದೇಶದಲ್ಲಿರುವ ಹಾಲಿನ ಕೊರತೆಯನ್ನು ಹೋಗಲಾಡಿಸಲು ಗೋಶಾಲೆಗಳನ್ನು ಸ್ಥಾಪಿಸಿ ಗೋಸಂಪತ್ತನ್ನು ಅಭಿವೃದ್ಧಿಗೊಳಿಸುವ ಮಾರ್ಗಗಳನ್ನು ತೋರಿಸಿಕೊಟ್ಟಿದ್ದಾರೆ. ಸೇವಾಗ್ರಾಮದ ಗೋಶಾಲೆ ಮಾದರಿಯಾಗಿದೆ.

ಹಳ್ಳಿಗರಿಗೆ ಅವಶ್ಯಕವಾದ ಸುಲಭ ವೈದ್ಯಚಿಕಿತ್ಸೆಗಳನ್ನು ತಮ್ಮ ಮೇಲೆ ತಾವೇ ಪ್ರಯೋಗ ನಡೆಸಿದ ಅನುಭವದಿಂದ ಸೂಚಿಸಿದ್ದಾರೆ.

ಗಾಂಧೀಜಿಯವರು ಗ್ರಾಮೋದ್ಧಾರ ಕಾರ್ಯದಲ್ಲಿ ಆಸಕ್ತಿ ವಹಿಸಿದ ಮೇಲೆ ಪ್ರಾಂತೀಯ ಸರಕಾರಗಳು ಈ ಕಾರ್ಯಕ್ಕೆ ಅಲ್ಪಸ್ವಲ್ಪ ಉತ್ತೇಜನ ಕೊಡಲು ಪ್ರಾರಂಭಿಸಿದುವು. ಆದರೆ ಈ ಕಾರ್ಯ ಅಷ್ಟು ಯಶಸ್ವಿಯಾಗಿಲ್ಲ. ಹಳ್ಳಿಗಳಿಗೆ ರಸ್ತೆ, ಚರಂಡಿ, ಉದ್ಯಾನ, ಪಂಚಾಯ್ತಿ ಹಾಲ್ ದೊರೆತರೆ ಸಾಲದು. ಈ ಶೃಂಗಾರ ಬಹಳಕಾಲ ನಿಲ್ಲಲಾರದು. ಹಳ್ಳಿಗಳ ಜನರು ಸುಧಾರಣೆ ಹೊಂದಬೇಕು. ಚೈತನ್ಯವಂತರಾಗಬೇಕು. ಪ್ರಾರಂಭಿಸಿದ ಅಭಿವೃದ್ಧಿ ಕಾರ್ಯವನ್ನು ಮುಂದುವರಿಸಿಕೊಂಡು ಹೋಗಬೇಕು. ಹಳ್ಳಿಗಳಲ್ಲಿರುವ ಪಾರ್ಟಿ ವೈಷಮ್ಯಗಳನ್ನು ತ್ಯಜಿಸಿ, ಪ್ರಾಮಾಣಿಕನಾದ ಯಜಮಾನನ ಮಾರ್ಗದರ್ಶಿತ್ವದಲ್ಲಿ ಮುಂದುವರಿಯಬೇಕು. ಈ ಕಾರ್ಯ ಅಗಾಧವಾದುದು ಹಾಗೂ ಕಷ್ಟತರವಾದುದು. ಆದರೆ ಹಳ್ಳಿಗಳು ಪುನರ್ರಚನೆಯಾಗದಿದ್ದರೆ ದೇಶಕ್ಕೆ ಆಶಾದಾಯಕ ಭವಿಷ್ಯವೇ ಇಲ್ಲ.

ಮೈಸೂರು ಸರ್ಕಾರದವರು ೧೯೩೬ ನೇ ಇಸವಿಯಿಂದ ಗ್ರಾಮೋದ್ಧಾರ ಕಾರ್ಯವನ್ನು ಮಾಡಲುಪಕ್ರಮಿಸಿದರು. ನಿರೀಕ್ಷಿಸಿದಷ್ಟು ಫಲ ಪ್ರಾಪ್ತಿಯಾಗಲಿಲ್ಲ. ಮಾದರಿ ಗ್ರಾಮಗಳು ಇತರರಿಗೆ ಆದರ್ಶವಾಗಲಿಲ್ಲ. ಸಹಸ್ರಾರು ರೂಪಾಯಿ ಖರ್ಚುಮಾಡಿ ಕೈಗೊಂಡ ಕಾರ್ಯಗಳನ್ನು ಉಳಿಸಿಕೊಳ್ಳುವ ಚೈತನ್ಯ ಇನ್ನೂ ಅನೇಕ ಹಳ್ಳಿಗಳಲ್ಲಿಲ್ಲ. ಹಳ್ಳಿಯನ್ನು ಶೃಂಗರಿಸುವ ಮೊದಲು ಹಳ್ಳಿಗರಲ್ಲಿ ಚೈತನ್ಯ ಉತ್ಸಾಹಗಳನ್ನು ತುಂಬಬೇಕು. ಅವರಿಗೆ ಹೆಚ್ಚಿನ

ಅಧಿಕಾರ, ಧನಸಹಾಯ ಕೊಡಬೇಕು. ನಶಿಸುತ್ತಿರುವ ವ್ಯವಸಾಯ ಮತ್ತು ಗ್ರಾಮಕೈಗಾರಿಕೆಗಳನ್ನು ಆಧುನಿಕ ಸನ್ನಿವೇಶಕ್ಕೆ ತಕ್ಕಂತೆ ಮಾರ್ಪಡಿಸಬೇಕು. ಸಹಕಾರಸಂಘಗಳು ಈ ಅಭಿವೃದ್ಧಿಗೆ ತಳಹದಿಯಾಗಬೇಕು. ಆಗ ಒಬ್ಬರು ಮತ್ತೊಬ್ಬರನ್ನು ಶೋಷಣೆ ಗುರಿಮಾಡುವುದಿಲ್ಲ. ಕೈಗಾರಿಕಾ ಕೆಲಸಗಾರನಿಗೂ ವ್ಯವಸಾಯದ ಕೆಲಸಗಾರನಿಗೂ ಒಂದು ಸಮಾನತೆ ಇರಬೇಕು. ಹಾಗಿಲ್ಲದಿದ್ದರೆ ಜನರು ವ್ಯವಸಾಯವನ್ನು ಬಿಟ್ಟು ಕೈಗಾರಿಕೆಗಳ ಕಡೆಗೆ ಹೆಚ್ಚು ಗಮನ ಕೊಡುತ್ತಾರೆ. ವ್ಯವಸಾಯದಿಂದ ಉತ್ಪನ್ನವಾಗುವ ಸಾಮಾನುಗಳಿಗೆ ಸರಿಯಾದ ಬೆಲೆ ದೊರೆಯಬೇಕು. ಹಾಗೆ ತಯಾರಾದ ಸಾಮಾನುಗಳ ಮಾರಾಟವು ವ್ಯವಸ್ಥಿತವಾಗಬೇಕು. ಗಾಂಧೀಜಿಯವರ ಆರ್ಥಿಕಯೋಜನೆ ಸಾಮಾನುಗಳನ್ನು ತಯಾರಿಸುವುದು ಜನರ ಉಪಯೋಗಕ್ಕಾಗಿ ಮಾತ್ರ. ಮಾರಾಟಮಾಡಿ ಲಾಭಸಂಪಾದನೆ ಮಾಡುವುದಕ್ಕೆ ಅಲ್ಲ. ಈ ಮೂಲತತ್ತ್ವವನ್ನು ಆರ್ಥಿಕ ಪ್ರವೀಣರು ಗ್ರಹಿಸಿದ ಹೊರತು ಹಳ್ಳಿಗಳ ಉದ್ಧಾರ ಬಹಳ ಕಷ್ಟ.

ಹಳ್ಳಿಗಳ ಉದ್ಧಾರಕ್ಕಾಗಿ ಸಹಸ್ರಾರು ಸಂಖ್ಯೆಯಲ್ಲಿ ದೇಶಸೇವಕರು ಬೇಕಾಗಿದ್ದಾರೆ. ಹಳ್ಳಿಗಳಲ್ಲಿ ನೆಲಸಿ ಅವರಂತೆ ಸರಳಜೀವನವನ್ನು ನಡೆಸಿಕೊಂಡು ಗ್ರಾಮೋದ್ಧಾರಕಾರ್ಯದಲ್ಲಿ ನಿರತರಾಗಬೇಕಾಗಿದೆ.

ಮೈಸೂರು ಸರಕಾರದವರು ಗ್ರಾಮಾಭಿವೃದ್ಧಿ ಯೋಜನೆಯನ್ನು ಪುನರ್ವ್ಯವಸ್ಥೆಗೊಳಿಸಿದ್ದಾರೆ. ಈ ಯೋಜನೆಯಲ್ಲಿ ಹಳ್ಳಿಗಳ ಶೃಂಗಾರಕ್ಕಿಂತ ಹಳ್ಳಿಗರ ಸುಧಾರಣೆಗೆ ಹೆಚ್ಚು ಪ್ರಾಮುಖ್ಯತೆ ಕೊಡಲಾಗಿದೆ.

ತಾಲ್ಲೂಕು, ಡಿಸ್ಟ್ರಿಕ್ಟ್ ಮತ್ತು ಕೇಂದ್ರ ಅಭಿವೃದ್ಧಿ ಸಮಿತಿಗಳನ್ನು ಸ್ಥಾಪಿಸಿ ಈ ಕಾರ್ಯವನ್ನು ಮಾಡಲಾಗುವುದು.



# ಧರ್ಮಸಾಮ್ರಾಜ್ಯ

## (ಶಬ್ದ ಚಿತ್ರ)

ನ. ಭದ್ರಯ್ಯ

ಹಂ. ಮತ್ತು ಗಂ.—ರಘುಪತಿರಾಘವ ರಾಜಾರಾಂ
ಪತಿತಪಾವನ ಸೀತಾರಾಂ
ಈಶ್ವರ ಅಲ್ಲ ತೇರೇನಾಮ್
ಸಬಕೂ ಸನ್ಮತಿ ದೇ ಭಗವಾನ್.

ಗಂ.—ಈ ದಿನ ಸುದಿನ. ನಮ್ಮ ಜನಾಂಗಪಿತ, ಸ್ವಾತಂತ್ರ್ಯಶಿಲ್ಪಿ, ಧರ್ಮ ಸಾಮ್ರಾಜ್ಯಪ್ರವಾದಿ ಮಹಾತ್ಮಗಾಂಧೀಜಿ ಜನ್ಮವೆತ್ತಿದ ದಿನ. ಧರ್ಮಯುಗದ ಪ್ರಾರಂಭದಿನ. ನಾವೆಲ್ಲ, ಪ್ರತಿಮನೆಯ, ಪ್ರತಿ ಹಳ್ಳಿಯ ಹಬ್ಬವಾಗಿ ಆಚರಿಸಬೇಕಾದ ದಿನ.

* * *

ಹಂ.—ಅಂದು ದಶರಥನಂದನ, ರಘುಕುಲದೀಪ, ಸೀತಾಪತಿ, ಶ್ರೀರಾಮಚಂದ್ರ ರಾಮರಾಜ್ಯಸ್ಥಾಪಿಸಿದ—

* * *

ತ್ರೇತಾಯುಗ-ರಾಮಾಯಣ. ಯುವರಾಜ ಶ್ರೀ ರಾಮಚಂದ್ರನ ಪಟ್ಟಾಭಿಷೇಕಕ್ಕೆ ಎಲ್ಲ ಅಣಿ. ಎಲ್ಲೆಲ್ಲೂ ಸಂಭ್ರಮ. ಜನರೆಲ್ಲರ ಸಂತೋಷ, ಆದರೆ ಕೈಕೇಯಿ—

ಕೈಕೇಯಿ—ರಾಮಚಂದ್ರ. ನಿನ್ನ ತಂದೆ ದಶರಥ ಚಕ್ರವರ್ತಿ ಮಾತಾಡಲಾರದವರಾಗಿದ್ದಾರೆ. ಆದರೆ ಅವರ ಅಭೀಷ್ಟ ಇದು; ನೀನು ಈರೇಳು ವರ್ಷ ವನವಾಸಕ್ಕೆ ತೆರಳಬೇಕು.

ರಾಮ—ತಾಯಿ ನಿಮ್ಮ ಅಪ್ಪಣೆ. ನನಗೆ ಸಂತೋಷ. ಇದೋ ಹೊರಟೆ. ನಿಮ್ಮೆಲ್ಲರಿಗೂ ಶುಭವಾಗಲಿ.

* * *

ಗಂ.—ಶ್ರೀ ರಾಮಚಂದ್ರ, ಮಡದಿ ಸೀತೆ, ತಮ್ಮ ಲಕ್ಷ್ಮಣ, ಇವರೊಡಗೂಡಿ, ಭೋಗಭಾಗ್ಯಗಳನ್ನು ತೊರೆದು, ಲೋಕಕಲ್ಯಾಣಕ್ಕಾಗಿ ಹೊರಟ. ನಿಂತಲ್ಲಿ ನಿಲ್ಲದೆ ಹದಿನಾಲ್ಕು ವರ್ಷ ಭಾರತದ ಎಲ್ಲ ಕಡೆಯಲ್ಲಿ ಸುತ್ತಿ, ದುರ್ಜನರನ್ನು ಶಿಕ್ಷಿಸಿ, ಸಜ್ಜನರನ್ನು ರಕ್ಷಿಸಿದ—ಧರ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದ.

ಹಂ.—ಹೊ! ಸೀತಾಪತಿ ಶ್ರೀ ರಾಮಚಂದ್ರನ ಕಾಲದಲ್ಲಿ ಬಾಳಿದ ಜನರು ಏನು ಪುಣ್ಯಾತ್ಮರು.

* * *

ಗಂ.—ಆಮೇಲೆ ಕೃಷ್ಣಪರಮಾತ್ಮನ ಅವತಾರ. ಗೋಪಾಲಕ, ಯೋಗೀಶ್ವರ. ಮತ್ತೆ ಧರ್ಮಸಾಮ್ರಾಜ್ಯಸ್ಥಾಪಕ

* * *

ದ್ವಾಪರಯುಗ—ಮಹಾಭಾರತ—ಕುರುಕ್ಷೇತ್ರ.

ಅರ್ಜುನ—ದೇವ, ಮಹಾನುಭಾವ, ಕ್ಷಮಿಸು. ನನಗೆ ಈ ಯುದ್ಧ ಬೇಡ. ಹಿರಿಯರನ್ನು, ಗೆಳೆಯರನ್ನು, ಬಂಧುಗಳನ್ನು ಕೊಂದು ರಾಜ್ಯ ವಾಳುವುದು ಬೇಡ. ಮತ್ತೆ ಕಾಡಿಗೆ ಹೋದರೂ ಚಿಂತೆಯಿಲ್ಲ. ಬಿಲ್ಲು ಹಿಡಿಯಲಾರೆ. ಬಾಣ ಬಿಡಲಾರೆ.

ಕೃಷ್ಣ—ಅರ್ಜುನ, ಯುದ್ಧ ಬೇಡವೆನ್ನುತ್ತೀಯಾ? ಇದು ನಿನ್ನ ಭ್ರಾಂತಿ. ನಿನಗೆ ಯುದ್ಧ ಮೈಗೂಡಿದ್ದು. ಅದು ನಿನ್ನ ಸ್ವಭಾವ. ಇದುವರೆಗೆ ಎಷ್ಟು ಯುದ್ಧ ಮಾಡಿದ್ದೀಯೆ? ಎಂದಾದರೂ ಹೀಗಾಗಿತ್ತೆ ನಿನಗೆ? ಈಗ ಬಂಧುಗಳನ್ನು ನೋಡಿ ಮೋಹಗೊಂಡು ಭ್ರಾಂತನಾಗಿ ಹೇಡಿಯಾಗಿದ್ದೀಯ. ಮೋಹದಿಂದ ಸ್ವಧರ್ಮದಿಂದ ಹಿಂಜರಿಯ ಬೇಡ. "ಶ್ರೇಯಾನ್ ಸ್ವಧರ್ಮೋ ನಿಗುಣ" ಅದು ನಿನಗೆ ಯೋಗ್ಯ. ಅನಾಸಕ್ತನಾಗು. ಧರ್ಮವನ್ನು ನಡೆಸು. ನೀನು ಅಷ್ಟಕ್ಕೆ ಮಾತ್ರ ಇದ್ದೀಯ.

ಅರ್ಜುನ—ದೇವ, ಮೋಹ ನಾಶವಾಯಿತು. ಸ್ವಧರ್ಮ ಭಾಸವಾಯಿತು. ಇದೋ ಧರ್ಮಪರಿಪಾಲನೆಗಾಗಿ ನಿಂತೆ.

* * *

ಹಂ.—ಕೃಷ್ಣಪರಮಾತ್ಮ ಮಹಾಭಾರತದ ಸೂತ್ರಧಾರಿಯಾಗಿದ್ದು ತನ್ನ ಲೀಲೆಯನ್ನು ಮೆರೆಸಿ ಧರ್ಮಸಾಮ್ರಾಜ್ಯ ಸ್ಥಾಪಿಸಿದ.

ಗಂ.—ಹೊ! ಕೃಷ್ಣಭಗವಾನ್ ಬಾಳಿದ ಕಾಲದಲ್ಲಿ ಬಾಳಿದವರು ಏನು ಪುಣ್ಯಾತ್ಮರು!

* * *

ಹೆಂ.—ಇಂದಿಗೆ ಎರಡೂವರೆ ಸಾವಿರ ವರ್ಷದಲ್ಲಿ ಭಗವಾನ್ ಬುದ್ಧನ ಅವತಾರ.

* * *

ಚನ್ನ—ಪ್ರಭು, ಹೀಗೆ ದೇಶಕೋಶಗಳನ್ನು ಬಿಟ್ಟು ಹೊರಡುವುದೇ? ಪ್ರಜೆಗಳ ವ್ಯಥೆಯನ್ನು ನೋಡು! ಹೆಂಡತಿ ವಿರಹವನ್ನು ತಾಳುವಳೆಂತು? ಈಗತಾನೆ ಸುಪುತ್ರ ಜನಿಸಿದ್ದಾನೆ! ನಿಮ್ಮ ತಂದೆಯ ಸಂಕಟವನ್ನು ಊಹಿಸಿಕೋ!

ಗೌತಮ—ಪ್ರಿಯ ಬಂಧು ಚನ್ನ, ಅಹುದು. ನಿನ್ನ ಪ್ರೀತಿ ದೊಡ್ಡದು. ಎಲ್ಲರೂ ನನ್ನನ್ನು ತಮ್ಮ ಆನಂದಕ್ಕಾಗಿ ಪ್ರೀತಿಸುವರು ಚನ್ನ! ಅದು ನನಗೆ ಗೊತ್ತು. ಆದರೆ ಮಾನವಕೋಟಿಯ ಸಂಕಟ ಜೀವನವನ್ನು ನೋಡಿ, ನೋಡಿ ನಾನು ಹೇಗೆತಾನೆ ನೆಮ್ಮದಿ ಪಡೆಯಲಿ? ಅವರ ಸಂಕಟ ನಿವಾರಣೆಗಾಗಿ, ಮಾನವರನ್ನ ಅಮರರನ್ನಾಗಿ ಮಾಡುವ ಸಲುವಾಗಿ, ಧರ್ಮರಾಜ್ಯಸ್ಥಾಪನೆಯ ಸಲುವಾಗಿ ದಾರಿಕಾಣಲು ಹೊರಟೆ ಚನ್ನ; ಹರಸು ನನ್ನ.

* * *

ಹೆಂ.—ಗೌತಮ ಬುದ್ಧನಾಗಿ ಮಾನವನು ಅಮರನಾಗುವ ದಾರಿ ತೋರಿ ಅಂದು ಮತ್ತೆ ಧರ್ಮಸಾಮ್ರಾಜ್ಯ ಸ್ಥಾಪಿಸಿದ.

ಗಂ.—ಆಹಾ! ಆ ಮಹಾಮಹಿಮನ ಕಾಲದಲ್ಲಿ ಬದುಕಿದ್ದು ಅವನ ವಾಣಿಯನ್ನು ಕೇಳಿದವರು ಎಂತಹ ಪುಣ್ಯಾತ್ಮರು! ಆ ಭಾಗ್ಯ ನಮಗೂ—

* * *

ಹೆಂ.—ಈ ಮುಂದೆ ನೂರಾರು ವರ್ಷಗಳ ಅನಂತರ ಅಂದಿನ ಜನ—ಮಹಾತ್ಮ ಗಾಂಧೀಜಿ ನಡೆದ ನೆಲದ ಮೇಲೆ ನಡೆದವರು, ಗಾಂಧೀಜಿ ಉಸಿರಾಡಿದ ಆವರಣದಲ್ಲಿ ಉಸಿರಾಡಿದವರು ಏನು ಪುಣ್ಯಾತ್ಮರಪ್ಪ! ಅವರ ವಾಣಿಯನ್ನು ಕೇಳಿದವರು ಎಂಥ ಭಾಗ್ಯವಂತರಪ್ಪ ಎನ್ನುತ್ತಾರೆ.

ಗಂ.—ಅಹುದಹುದು, ನಾವೂ ಪುಣ್ಯಾತ್ಮರು! ಆದರೆ ನಾವದಕ್ಕೆ ಅರ್ಹರೆ?

* * *

ಹಂ.—ಸ್ವಾತಂತ್ರ್ಯ ದಿನ. ದೇಶದ ಎಲ್ಲೆಲ್ಲೂ ಸಂಭ್ರಮ! ಎಲ್ಲೆಲ್ಲೂ ಉತ್ಸಾಹ ಹುಮ್ಮಸ್ಸು, ಆನಂದ, ಎಲ್ಲೆಲ್ಲೂ ವೈಭವ, ದಿಲ್ಲಿಯಿಂದ ಹಿಡಿದು ಹಳ್ಳಿಯವರಿಗೆ ಎಲ್ಲರೂ ಸಂತೋಷದಿಂದ ಮೆರೆಯುತ್ತಿದಾರೆ!

* * *

ಗಂ.—ಗಾಂಧೀಜಿ ಎಲ್ಲಿ?

ಹಂ.—ಗಾಂಧೀಜಿ! ಅದೋ ಆ ಮೂಲೆಯಲ್ಲಿ! ಎಲ್ಲಿ ಮಾನವ ಹಿಂಸೆಗೆ ಒಳಗಾಗಿ ಕೊರಗುತ್ತಿರುವನೋ ಅಲ್ಲಿ! ಎಲ್ಲಿ ಹೆಂಗಸು ಸಂಕಟದಿಂದ ಕಣ್ಣೀರು ಸುರಿಸುತ್ತಿರುವಳೋ ಅಲ್ಲಿ! ಎಲ್ಲಿ ಕ್ರೂರ ಮಾನವರು ತನ್ನ ಸೋದರನ ರಕ್ತ ಹೀರುತ್ತಿರುವರೋ ಅಲ್ಲಿ! ಬಂಗಾಳದಲ್ಲಿ, ನವಖಲಿಯಲ್ಲಿ! ನೊಂದವರನ್ನು ಸಂತೈಸುತ್ತಾ, ದುಃಖಪಡುವವರ ಕಣ್ಣೀರೊರಸುತ್ತಾ, ತನ್ನ ಆತ್ಮಬಲದಿಂದ ದುರಾಚಾರಿಗಳ ಮನಸ್ಸನ್ನು ಒಲಿಸಿಕೊಳ್ಳುತ್ತಾ, ಹಳ್ಳಿಯಿಂದ ಹಳ್ಳಿಗೆ ಪಾದಚಾರಿಯಾಗಿ, ಏಕಾಂಗಿಯಾಗಿ, ಯಾತ್ರೆ ಹೊರಟಿದ್ದಾರೆ. ಈ ದೃಶ್ಯ ಶ್ರೀ ರಾಮಚಂದ್ರ ಲೋಕಕಲ್ಯಾಣಕ್ಕಾಗಿ, ಶಿಷ್ಟ ರಕ್ಷಣೆಗಾಗಿ ಈರೇಳು ವರ್ಷ ವನವಾಸಕ್ಕೆ ಹೊರಟ ದೃಶ್ಯಕ್ಕೇನೂ ಕಡಿಮೆಯಿಲ್ಲ.

ಗಂ.—ಶ್ರೀ ರಾಮಚಂದ್ರನಿಗಾದರೋ, ಧರ್ಮಪತ್ನಿ, ಸಾಧ್ವೀ ಸೀತೆ ಸಹವಾಸಿಯಾಗಿದ್ದಳು. ಅಣ್ಣನ ಆಜ್ಞಾನುಸಾರ ನಡೆದುಕೊಳ್ಳಲು ತಮ್ಮ ಲಕ್ಷ್ಮಣಸಿದ್ಧ.

ಹಂ.—ಅಹುದು. ಈ ಎರಡನ್ನೂ ಗಾಂಧೀಜಿ ಆಗಖಾನ್ ಅರಮನೆ, ಸೆರೆಮನೆಯಲ್ಲಿ ಕಳೆದುಕೊಂಡಿದ್ದರು.

* * *

ಗಂ.—ನವದೆಹಲಿ, ಪ್ರಾರ್ಥನಾಸಭೆ.

ಹಿನ್ನೆಲೆಯಲ್ಲಿ—ರಘುಪತಿರಾಘವ ರಾಜಾರಾಮ್
ಪತಿತಪಾವನ ಸೀತಾರಾಂ

ಜನ—ಗಾಂಧೀಜಿ, ಗಾಂಧೀಜಿ!

ಜನ—ಗಾಂಧೀಜಿ ಕಿ ಜೈ

ಹಂ.—ಯಾರವನು? ಆ ಕಡೆ ಹೋಗುತ್ತಿದಾನೆ. ಓಹೋ ಪ್ರಣಾಮ ಮಾಡುವನೋ ಏನೋ?

—ಟಪ್, ಟಪ್, ಟಪ್, ಟಪ್,—
ಹೇರಾಮ್, ಹೇರಾಮ್.

* * *

ಎಲ್ಲರೂ—(೧) ರಘುಪತಿರಾಘವ ರಾಜಾರಾಮ್ . . .
(೨) ವೈಷ್ಣವ ಜನತೋ . . .

* * *

ಹೆಂ.—ಗಾಂಧೀಜಿ ಅಮರರಾದರು. ತಮ್ಮ ಮಕ್ಕಳಲ್ಲೇ ಒಬ್ಬನ ಕೈಯಿಂದ ತಮ್ಮ ದೇಹವನ್ನು ಕೊಲ್ಲಿಸಿಕೊಂಡು ಅಮರರಾದರು. "ನಾವು ಮನುಷ್ಯಮಾತ್ರರು, ನಮ್ಮ ಗುರುವನ್ನು ಮರೆಯಲಾರೆವು. ಆದ್ದರಿಂದ ಅವರ ಮರಣಕ್ಕಾಗಿ ಎಂದೆಂದಿಗೂ ದುಃಖಪಡುತ್ತೇವೆ. ಹಾಗೆ ಮಾಡುವುದು ಅವರ ಇಷ್ಟಕ್ಕೆ ವಿರೋಧ. ಅವರಿಗೆ ಅತ್ಯಂತ ಹತ್ತಿರವಾದವರೂ, ಪ್ರಿಯರಾದವರೂ, ಗತಿಸಿದಾಗಲೂ ಸಹ ಅವರ ಕಣ್ಣಲ್ಲಿ ಒಂದು ಹನಿ ನೀರು ಕಾಣಲಿಲ್ಲ; ಕೈಕೊಂಡ ಕಾರ್ಯಕ್ಕೆ ನಿಶ್ಚಲ ಚಿತ್ತದಿಂದ ಸೇವೆ ಮಾಡಬೇಕೆಂಬ ನಿರ್ಧಾರ ಮಾತ್ರ ಕಾಣುತ್ತಿತ್ತು. ಆದ್ದರಿಂದ ನಾವು ಅವರ ಮರಣಕ್ಕಾಗಿ ಬರಿಯ ಸಂತಾಪ ತೋರಿದರೆ, ಅವರ ಜಯಂತಿಯಲ್ಲಿ ಉತ್ಸಾಹ ಮಾತ್ರ ತೋರಿದರೆ ಅವರ ಅಸಮಾಧಾನಕ್ಕೆ ಪಾತ್ರರಾಗುತ್ತೇವೆ. ಹಾಗೆ ಮಾಡುವುದರಿಂದ ನಾವು ಅವರಿಗೆ ಅಲ್ಪ ಗೌರವ ಸಲ್ಲಿಸಿದಂತಾಗುತ್ತದೆ. ನಮ್ಮ ಭಕ್ತಿಪ್ರದರ್ಶನಕ್ಕಿರುವುದು ಒಂದೇ ದಾರಿ ಅಂದರೆ—ಧರ್ಮಸಾಮ್ರಾಜ್ಯಸ್ಥಾಪನೆಗಾಗಿ ಅವರು ಯಾವ ಮಹಾಕಾರ್ಯದ ಹೊರೆಯನ್ನು ಹೊತ್ತು ಬಹುಮಟ್ಟಿಗೆ ನಿರ್ವಹಿಸಿದರೋ ಆ ಕೆಲಸಕ್ಕೆ ನಾವು ಪಣತೊಟ್ಟು ನಿಲ್ಲುವುದು. ಅದರಿಂದ ನಾವು ಕಾರ್ಯತತ್ಪರರಾಗಬೇಕು, ದುಡಿಯಬೇಕು, ತ್ಯಾಗಮಾಡಬೇಕು. ಸ್ವಲ್ಪಮಟ್ಟಿಗಾದರೂ, ಅವರ ಅನುಯಾಯಿಗಳೆನ್ನಿಸಿಕೊಳ್ಳುವ ಯೋಗ್ಯತೆಯನ್ನು ಗಳಿಸಬೇಕು. ಅವರ ಕಾಲದಲ್ಲಿ ಬಾಳಿದ ಪುಣ್ಯಾತ್ಮರೆನಿಸಿಕೊಳ್ಳಬೇಕು."

ಜನ—ಗಾಂಧೀಜಿ ಕಿ ಜೈ.

ಗಂ.—ಗಾಂಧೀಜಿ ತೋರಿಕೊಟ್ಟ ದಾರಿಯಾವುದು ?

ಹೆಂ.—ಪರರ ಕಷ್ಟವನ್ನು ಅರಿ; ಅರಿತು ನೆರವಾಗು; ನೆರವಾದರೂ ಹೆಮ್ಮೆಗೊಳ್ಳಬೇಡ. ಯಾರನ್ನು ನಿಂದಿಸದಿರು, ಎಲ್ಲರಲ್ಲೂ ವಿನೀತನಾಗಿರು,

ಎಲ್ಲರನ್ನೂ ಸಮದೃಷ್ಟಿಯಿಂದ ನೋಡು. ದುರಾಶಾವಂತನಾಗಬೇಡ, ಪರಸ್ತ್ರೀಯರನ್ನು ತಾಯಿಯಂತೆ ಕಾಣು, ಎಂತಹ ಕಷ್ಟದಲ್ಲಾದರೂ ಸತ್ಯಸಂಧನಾಗಿ ಬಾಳು, ಪರಧನಕ್ಕೆ ಆಶೆಪಡಬೇಡ, ಸೋಂಬೇರಿಯಾಗಿರಬೇಡ. ಶರೀರಶ್ರಮದಿಂದ ಆಹಾರವನ್ನು ಸಂಪಾದಿಸು, ಕೂಡಲೇ ಅಗತ್ಯವಿಲ್ಲದುದನ್ನು ನಾಳೆಗೆಂದು ಶೇಖರಿಸಬೇಡ. ಮೋಹಮಾಯೆಗಳ ಬಲೆಗೆ ಬೀಳದಿರು. ದೃಢವೈರಾಗ್ಯಶಾಲಿಯಾಗು. ದೇವರನ್ನು ಮರೆಯಬೇಡ. ಪಾಪಭೀರುವಾಗಿರು. ಛಲ ಕಪಟ ಬೇಡ. ಸೇವಾತತ್ಪರನಾಗಿ ಬಾಳು. ಆಗ ಭಾರತಭೂಮಿ ಧರ್ಮಕ್ಷೇತ್ರವಾಗುತ್ತದೆ; ಧರ್ಮಸಾಮ್ರಾಜ್ಯ ಸ್ಥಾಪನೆಯಾಗುತ್ತದೆ.



# ಗಾಂಧಿಯವರೂ ಗ್ರಾಮೋದ್ಧಾರವೂ

ಗೊರೂರು ರಾಮಸ್ವಾಮಿ ಅಯಂಗಾರ್

ಇಂದಿನ ನನ್ನ ಭಾಷಣದ ವಿಷಯ ಭಾರತದಷ್ಟೇ ಹಳೆಯದು. ಆದರೆ ನಮ್ಮ ದೇಶದಲ್ಲಿ ಈ ಪ್ರಶ್ನೆಯನ್ನು ಇಷ್ಟು ಪ್ರಾಮುಖ್ಯವಾದುದನ್ನಾಗಿ ಮಾಡಿದವರು ಗಾಂಧಿಜಿ.

೧೯೨೧ ನೆ ಇಸವಿಯ ಅಸಹಕಾರದಲ್ಲಿ ಅಂದಿನ ಬ್ರಿಟಿಷ್ ಸರ್ಕಾರ ಗಾಂಧಿಯವರನ್ನು ಸೆರೆಹಿಡಿದು ವಿಚಾರಣೆಗೆ ಒಳಪಡಿಸಿದಾಗ, ಕೋರ್ಟಿನಲ್ಲಿ ನ್ಯಾಯಾಧಿಪತಿಯು ಪದ್ಧತಿಯಂತೆ ಗಾಂಧಿಯವರನ್ನು "ನಿಮ್ಮ ಕಸಬು ಏನು?" ಎಂದು ಕೇಳಿದರು. ಗಾಂಧಿಯವರು ಗಂಭೀರವಾಗಿ "ಕೃಷಿಕ ಮತ್ತು ನೆಯ್ಗೆಯವ" ಎಂದು ಉತ್ತರಕೊಟ್ಟರು. ಜಗತ್ತಿನ ಅತ್ಯಂತ ಪ್ರಬಲ ರಾಷ್ಟ್ರ ಒಂದನ್ನು ಒಂದು ಹೊಸ ಬಗೆಯ ಆತ್ಮಶಕ್ತಿಯ ಅಸ್ತ್ರದಿಂದ ಪೂರ್ಣವಾಗಿಯೇ ಸೋಲಿಸಿ, ನಲವತ್ತುಕೋಟಿ ತೇಜೋಹೀನರಿಗೆ ಚೈತನ್ಯವನ್ನು ತುಂಬಿ, ನಿರಾಯುಧರನ್ನು ಗಂಡುಗಲಿಗಳನ್ನಾಗಿ ಮಾಡಿ, ಲಾಯಿಡ್ ಜಾರ್ಜ್ ಮುಂತಾದವರಿಂದಲೂ ಸಹ ಉತ್ತಮ ರಾಜತಂತ್ರಜ್ಞನೆಂದು ಪ್ರಶಸ್ತಿಯನ್ನು ಸಂಪಾದಿಸಿದ ಗಾಂಧಿಯವರು, ತಮ್ಮ ಕಸಬು 'ಕೃಷಿ ಮತ್ತು ನೆಯ್ಗೆ' ಎಂದು ಹೇಳಿದಾಗ ನ್ಯಾಯಾಧಿಪತಿಗೆ ಮಾತ್ರವೇ ಅಲ್ಲ, ಜಗತ್ತಿಗೇ ಆಶ್ಚರ್ಯವಾಯಿತು. ಗಾಂಧಿಯವರು ತಾನು ರಾಜಕೀಯ ಯೋಧ, ಚಳುವಳಿಗಾರ, ದೇಶಭಕ್ತ, ಪತ್ರಿಕಾಕರ್ತ, ಕಾಂಗ್ರೆಸ್ಸಿನವ ಎಂದು ಏನು ಬೇಕಾದರೂ ಹೇಳಿಕೊಳ್ಳಬಹುದಾಗಿದ್ದಿತು. ಆದರೆ ಅವರು ಅದೊಂದನ್ನೂ ಹೇಳಲಿಲ್ಲ. ಅವರ ಅಭಿಪ್ರಾಯದಲ್ಲಿ ಕೃಷಿಕ ನೇಯ್ಗೆಯವ ಎಂಬ ಮಾತುಗಳು ಭಾರತದ ಗುರಿಯನ್ನೆಲ್ಲ ಸ್ಪಷ್ಟಪಡಿಸುವುವಾಗಿದ್ದುವು. ಮತ್ತೊಂದು ಸಂದರ್ಭದಲ್ಲಿ ಗಾಂಧಿಯವರು ನೇಯ್ಗೆಯೂ ವ್ಯವಸಾಯವೂ ಹಿಂದೂದೇಶದ ಎರಡು ಶ್ವಾಸಕೋಶಗಳು ಎಂದು ಹೇಳಿದ್ದಾರೆ.

ಭಾರತದ ನಾಗರೀಕತೆ ಗ್ರಾಮ ಪ್ರಧಾನವಾದುದು. ಈ ಇಪ್ಪತ್ತನೆಯ ಶತಮಾನದ ಅಣುಬಾಂಬಿನ ಪ್ರಾಬಲ್ಯದಿಂದ ಸಹ ಆ ಮಾತಿಗೆ ಅಪವಾದ

ವಿಲ್ಲ. ಗಾಂಧಿ ಹೀಗೆ ಹೇಳಿದ್ದಾರೆ: "ನಮ್ಮ ದೇಶದಲ್ಲಿ ಸೇಕಡ ೯೦ ಜನ ಹಳ್ಳಿಗಳಲ್ಲಿದ್ದಾರೆ. ಆ ಹಳ್ಳಿಗಳ ಉದ್ಧಾರದ ಕಾರ್ಯಕ್ರಮವನ್ನು ಹಾಕಿದರೆ ಪಟ್ಟಣಗಳೂ ತಾವಾಗಿಯೇ ಉದ್ಧಾರವಾಗುತ್ತವೆ. ಹಳ್ಳಿಗಳು ನಾಶವಾದರೆ ಭಾರತ ನಾಶವಾಗುತ್ತದೆ. ಭಾರತ ಆಗ ಭಾರತವಾಗುವುದಿಲ್ಲ. ಜಗತ್ತಿಗೆ ಭಾರತದ ಸಂದೇಶ ನಾಶವಾಗುವುದು. ಹಳ್ಳಿಗಳ ಲೂಟಿ ನಿಂತಾಗಲೇ ಹಳ್ಳಿಗಳ ಏಳಿಗೆ ಸಾಧ್ಯ. ಆದುದರಿಂದ ಹಳ್ಳಿಗಳು ಸ್ವಯಂಪರಿಪೂರ್ಣವಾಗಿರುವಂತೆ ನಾವು ಪ್ರಯತ್ನಿಸಬೇಕು. ಆ ದೃಷ್ಟಿಯಿಂದ ಯಂತ್ರೋಪಕರಣಗಳನ್ನು ಬದಗಿಸಲು ನನ್ನ ಅಡ್ಡಿ ಇಲ್ಲ. ಭಾರತದಲ್ಲೆಲ್ಲಾ ಗ್ರಾಮ ಸ್ವರಾಜ್ಯಗಳಿರಬೇಕು. ಅವು ತಮ್ಮ ನಿತ್ಯದ ಆವಶ್ಯಕತೆಗಳಿಗೆ ಇತರರ ಮೇಲೆ ಅವಲಂಬಿಸಬಾರದು. ಎಲ್ಲಿ ಅವಲಂಬನೆ ಆವಶ್ಯಕವೋ ಅಲ್ಲಿರಲಿ. ಈ ದೃಷ್ಟಿಯಿಂದ ಪ್ರತಿ ಹಳ್ಳಿಯೂ ಆಹಾರ ಧಾನ್ಯಗಳನ್ನೂ ಹತ್ತಿಯನ್ನೂ ಬೆಳೆದುಕೊಳ್ಳಬೇಕು. ದನಗಳ ತಳಿಯನ್ನು ವೃದ್ಧಿಪಡಿಸಿಕೊಳ್ಳಬೇಕು. ದನಗಳಿಗಾಗಿ ಪ್ರತಿ ಹಳ್ಳಿಯಲ್ಲಿಯೂ ಗೋಮಾಳವಿರಬೇಕು. ಹುಡುಗರಿಗೆ ಆಟದ ಮೈದಾನ, ಹಿರಿಯರಿಗೆ ನಾಟಕಶಾಲೆ, ಗ್ರಾಮಪಂಚಾಯ್ತಿ ಭವನ, ಶುದ್ಧವಾದ ನೀರು ಇರಬೇಕು. ಮಕ್ಕಳಿಗೆ ಬಲಾತ್ಕಾರವಾಗಿ ಮೂಲ ಶಿಕ್ಷಣವನ್ನು ಕೊಡಬೇಕು. ಎಲ್ಲಾ ಕಾರ್ಯಗಳನ್ನೂ ಸಾಧ್ಯವಾದ ಮಟ್ಟಿಗೆ ಸಹಕಾರತತ್ತ್ವಕ್ಕನುಸಾರವಾಗಿಯೇ ನಡೆಸಬೇಕು. ಇಂತಹ ಗ್ರಾಮ ಸ್ವರಾಜ್ಯದಲ್ಲಿ ಜಾತಿಗಳಿರುವುದಿಲ್ಲ. ಅಸ್ಪೃಶ್ಯತೆ ಇರುವುದಿಲ್ಲ. ಗ್ರಾಮದ ರಕ್ಷಣೆಯನ್ನು ಗ್ರಾಮಸ್ಥರೇ ಸರದಿವಾರಾಗಿ ನೋಡಿಕೊಳ್ಳುತ್ತಾರೆ. ಪಂಚಾಯ್ತಿ ಗ್ರಾಮದ ಸರ್ವಾಧಿಕಾರಿಯಾಗಿರಬೇಕು. ಪ್ರತಿ ಒಂದು ಗ್ರಾಮವೂ ಇಂದು ಇಂತಹ ಗ್ರಾಮ ಸ್ವರಾಜ್ಯವಾಗಬಲ್ಲದು. ಇಲ್ಲಿ ವ್ಯಕ್ತಿಗೆ ಸ್ವಾತಂತ್ರ್ಯ. ಪೂರ್ಣ ಸ್ವರಾಜ್ಯ. ವ್ಯಕ್ತಿಯೇ ತನ್ನ ಸ್ವಾತಂತ್ರ್ಯದ ಶಿಲ್ಪಿ. ಇಂತಹ ಹಳ್ಳಿಗಳು ಪ್ರಪಂಚವನ್ನೇ ಬೇಕಾದರೂ ಎದುರಿಸಬಲ್ಲವು. ಯಾಕೆಂದರೆ ಪ್ರತಿಯೊಬ್ಬ ಹಳ್ಳಿಯವನೂ ತನ್ನ ಹಳ್ಳಿಯ ಗೌರವವನ್ನು ಉಳಿಸಿಕೊಳ್ಳಲು ಪ್ರಾಣ ತೆರಲೂ ಸಿದ್ಧನಾಗಿರುತ್ತಾನೆ. ನನ್ನ ಕನಸಿನ ಸ್ವರಾಜ್ಯ ದೀನರ ಮತ್ತು ಬಡವರ ಸ್ವರಾಜ್ಯ. ಹಳ್ಳಿಯವರಿಗೆ ಜೀವನದ ಎಲ್ಲಾ ಆವಶ್ಯಕತೆಗಳೂ ದೊರಕಬೇಕು. ಪಟ್ಟಣಿಗರಿಗಿರುವ ಸೌಕರ್ಯಗಳೆಲ್ಲ ಅವರಿಗೂ ದೊರಕಬೇಕು. ಅಲ್ಲಿಯವರಿಗೆ ನಮ್ಮ ಸ್ವಾತಂತ್ರ್ಯ ಪೂರ್ಣ ಸ್ವರಾಜ್ಯವಲ್ಲ. ನನ್ನ ಸ್ವರಾಜ್ಯ ಬರಿಯ ಧನಿಕರ ಸ್ವರಾಜ್ಯವಲ್ಲ, ಅದು ಬಡವರ ಸ್ವರಾಜ್ಯ" ಎಂದಿದ್ದಾರೆ.

ಮಹಾತ್ಮ ಗಾಂಧಿಯವರ ದೃಷ್ಟಿಯಲ್ಲಿ ಸ್ವರಾಜ್ಯವೆಂದರೆ ಈ ಗ್ರಾಮ ಸ್ವರಾಜ್ಯವೇ. "ಸ್ವರಾಜ್ಯವೆಂಬುದು ಸರ್ವರ ಹಿತ. ಸ್ವತಂತ್ರವಾದ ಯೂರೋ

ಪಿನ ರಾಷ್ಟ್ರಗಳಲ್ಲಿಯೂ ಈ ಸ್ವರಾಜ್ಯವಿಲ್ಲ. ಯೂರೋಪಿನವರು ತಮ್ಮ ಹಿತಕ್ಕಾಗಿ ಏಷಿಯ ಆಫ್ರಿಕ ಜನಾಂಗಗಳನ್ನು ಲೂಟಿ ಹೊಡೆಯುತ್ತಿದ್ದಾರೆ. ಪ್ರಜಾತಂತ್ರದ ಹೆಸರಿನಲ್ಲಿ ತಮ್ಮ ದೇಶದ ಬಡವರನ್ನೇ ಸುಲಿಯುತ್ತಿದ್ದಾರೆ. ಈ ಸುಲಿಗೆಯ ಹಿಂದೆ ಬಂದೂಕ ಹಿಂಸೆ ಅಡಗಿದೆ. ಭಾರತದ ಮಟ್ಟಿಗೆ ಸ್ವರಾಜ್ಯವೆಂದರೆ ಬ್ರಿಟಿಷ್ ಹೌಸ್ ಆಫ್ ಕಾಮನ್ಸ್‌ರ ಅನುಕರಣೆಯಾಗಲಿ ಸೋವಿಯಟ್, ಇಟಲಿ, ಜರ್ಮನಿಗಳ ಅನುಕರಣವಾಗಲಿ ಅಲ್ಲ. ಆ ಕ್ರಮಗಳು ಅವರ ಬೆಳವಣಿಗೆಗೆ ಅನುಸಾರವಾಗಿವೆ. ನಮ್ಮ ಸಂಸ್ಕೃತಿಗೆ ಅನುಗುಣವಾದುದನ್ನು ನಾವು ಸೃಷ್ಟಿಸಿಕೊಳ್ಳಬೇಕು. ನಾನು ಅದನ್ನೇ ರಾಮರಾಜ್ಯವೆಂದು ಕರೆದಿದ್ದೇನೆ. ಅದೇ ನೀತಿಯ ಬಲದಿಂದ ಆಳ್ವಿಕೆ ಮಾಡುವ ಪ್ರಜಾಪ್ರಭುತ್ವ."

ಮಹಾತ್ಮ ಗಾಂಧಿಯವರು ಹಳ್ಳಿಯವರ ಉದ್ಯೋಗವನ್ನು ಕಿತ್ತುಕೊಳ್ಳದ ಯಾವ ಯಂತ್ರವನ್ನೂ ವಿರೋಧಿಸುವುದೇ ಇಲ್ಲ. ಪದಾರ್ಥಗಳನ್ನು ಹೆಚ್ಚಾಗಿ ತಯಾರಿಸಬೇಕೆಂಬ ತತ್ತ್ವವನ್ನು ಮಹಾತ್ಮ ಗಾಂಧಿಯವರೂ ಒಪ್ಪುತ್ತಾರೆ. ಅವರು ಒಂದೆಡೆ "Mass production ಬೇಡ. Production by masses ಇರಲಿ (ಅಸಂಖ್ಯಾತವಾದ ಪದಾರ್ಥ ತಯಾರಿ ಬೇಡ. ಅಸಂಖ್ಯಾತ ಜನರಿಂದ ಪದಾರ್ಥಗಳ ತಯಾರಿ ಆಗಲಿ)" ಎಂದಿದ್ದಾರೆ. ಅವರು ಸಮತಾವಾದಿಗಳಿಗಿಂತ ಒಂದು ಹೆಜ್ಜೆ ಮುಂದೆ ಹೋಗುತ್ತಾರೆ. ಸಮತಾವಾದಿಗಳು ಪದಾರ್ಥಗಳನ್ನು ಒಂದೆಡೆ ದೊಡ್ಡ ಪ್ರಮಾಣದಲ್ಲಿ ತಯಾರಿಸಿ ಸಮನಾಗಿ ಹಂಚಬೇಕೆಂದರೆ, ಗಾಂಧಿಯವರು distribution at source—ಮೂಲತಯಾರಿಕೆಯ ಸ್ಥಳದಲ್ಲಿಯೇ ಪದಾರ್ಥಗಳ ಹಂಚಿಕೆಯಾಗಬೇಕೆನ್ನುತ್ತಾರೆ. ಹೀಗಾಗಬೇಕಾದರೆ ಕೈಗಾರಿಕೆಗಳು ವಿಕೇಂದ್ರೀಕೃತವಾಗಬೇಕು. ಅವು ಗ್ರಾಮಗಳಲ್ಲಿ ಹರಡಬೇಕು. ನಿರ್ಜೀವವಾದ ಗ್ರಾಮ ಜೀವನಾಡಿಗಳಲ್ಲಿ ಗ್ರಾಮೋದ್ಯೋಗದ ರಕ್ತ ಸಂಚಾರವಾದರೆ ಪೈರಿನ ನಡುವೆ ನೀರಿನ ಕಾಲುವೆಗಳು ಹರಿದಂತೆ ಹಳ್ಳಿಗಳು ಫಲವತ್ತಾಗುತ್ತವೆ. ಹಳ್ಳಿಗಳಲ್ಲಿ ಹೊಸಜೀವ, ಹೊಸತೇಜಸ್ಸು, ಹೊಸಬೆಳಕು ಹರಿಯುತ್ತದೆ.

ಜನರ ದೃಷ್ಟಿ ಹಳ್ಳಿಗಳ ಕಡೆ ತಿರುಗಲು ಮಹಾತ್ಮ ಗಾಂಧಿಯವರಷ್ಟು ದುಡಿದವರು ಮತ್ತಾರೂ ಇಲ್ಲ. ಹಳ್ಳಿಯವರನ್ನು ಕಂಡರೆ ಅವರ ಹೃದಯ ದುಃಖದಿಂದ ಆರ್ದ್ರವಾಗುತ್ತಿದ್ದಿತು. ಹಳ್ಳಿಯವರೊಂದಿಗೆ ಅವರಷ್ಟು ಪೂರ್ಣವಾಗಿ ಬೆಂದಾದವರು ಭಾರತದ ರಾಜಕೀಯದಲ್ಲಿ ಹಿಂದೆಂದೂ ಇರಲಿಲ್ಲ. ಮುಂದೆಯೂ ಆಗುವುದಿಲ್ಲ. ಇಂತಹ ಹಳ್ಳಿಯ ಪ್ರೇಮಿಗಳು ಯಾವ ದೇಶದ ಮುಖಂಡರಲ್ಲಿಯೂ ಇರಲ. ಗಾಂಧಿಯವರ ಪ್ರತಿಯೊಂದು ಕಾರ್ಯದ

ಗುರಿಯೂ ಹಳ್ಳಿಯವರ ಹಿತವೇ ಆಗಿದ್ದಿತು. ಭಾರತದ ಹಳ್ಳಿಗಳನ್ನೆಲ್ಲಾ ಅವರು ಕಾಲುನಡಿಗೆಯಿಂದ ೩-೪ ಸಲ ಸಂಚರಿಸಿದ್ದರು. ಅನೇಕವೇಳೆ ಬಿಸಿಲಿನಲ್ಲಿ ೧೫-೨೦ ಮೈಲಿ ಪಾದಚಾರಿಯಾಗಿ ಸಂಚರಿಸಿ ಹಳ್ಳಿಯವರ ಕಷ್ಟವನ್ನು ಅನುಭವಮಾಡಿಕೊಂಡಿದ್ದರು. ರಾಟೆಯನ್ನು ಅವರು ಕಂಡುಹಿಡಿದುದು ನಿರುದ್ಯೋಗಿಗಳಾದ ಹಳ್ಳಿಯವರಿಗೆ ಒಂದು ಉದ್ಯೋಗವನ್ನು ಕಲ್ಪಿಸಲೆಂದೇ. ಹಳ್ಳಿಯವರ ಕಷ್ಟವನ್ನು ನೆನೆದು ನೆನೆದು ಅವರು ಕೊರಗುತ್ತಿದ್ದರು. ೧೯೩೬ನೆ ಸಂವತ್ಸರದಲ್ಲಿ ಬೆಂಗಳೂರಿನ ನಾಶನಲ್ ಹೈಸ್ಕೂಲಿನ ಎದುರಿಗೆ ದಕ್ಷಿಣಭಾರತ ಖಾದಿ ಪ್ರದರ್ಶನ ನಡೆದಾಗ ಮಹಾತ್ಮ ಗಾಂಧಿಯವರು ಪ್ರದರ್ಶನದಲ್ಲಿ ಮಾತನಾಡುತ್ತಾ ಭಾರತದ ಹಳ್ಳಿಗಳ ದಾರಿದ್ರ್ಯವನ್ನು ಚಿತ್ರಿಸಿದರು. ಶಂಕರಲಾಲ್ ಬ್ಯಾಂಕರ್ ಒಂದು ಹಳ್ಳಿಯ ಮುದುಕಿಗೆ "ನೀನು ಪ್ರತಿದಿವಸ ಬಟ್ಟೆ ಒಗೆದುಕೊಂಡು ಪರಿಶುದ್ಧವಾಗಿರಬೇಕು" ಎಂದು ಹೇಳಿದಾಗ ಆಕೆ "ಅಪ್ಪಾ, ನನಗೆ ಇರುವುದು ನಾನು ಉಟ್ಟ ಸೀರೆಯೊಂದೆ" ಎಂದಳಂತೆ. ಆ ಮಾತನ್ನು ಜ್ಞಾಪಿಸಿಕೊಂಡು, ಭಾರತಮಾತೆಯರ ದಾರಿದ್ರ್ಯದ ಬಾಳನ್ನು ನೆನೆಯುತ್ತಾ, ಗಾಂಧಿಯವರು ಗದ್ಗದ ಕಂಠರಾಗಿ ಮುಂದೆ ಮಾತನಾಡಲಾರದೆ ಕಣ್ಣೀರು ಸುರಿಸುತ್ತಾ ೫ ನಿಮಿಷ ಕುಳಿತುಬಿಟ್ಟರು. ಅನಂತರ ನಿಧಾನವಾಗಿ ಚೇತರಿಸಿಕೊಂಡು ಭಾಷಣವನ್ನು ಮುಗಿಸಿದರು. ಹಿಂದೂದೇಶದ ಬಡವ ಅನುಭವಿಸದ ಯಾವ ಸುಖವನ್ನೂ ತಾವು ಅನುಭವಿಸುವುದಿಲ್ಲವೆಂದರು. ಆಹಾರ ವಸ್ತ್ರ ಇವನ್ನು ಹಳ್ಳಿಯವರ ಮಟ್ಟಕ್ಕೆ ತಂದುಕೊಂಡರು. ವೈಸರಾಯ್, ಚಕ್ರವರ್ತಿ ಎಲ್ಲರನ್ನೂ ಭಾರತದ ಬಡವರ ಉಡುಪಿನಲ್ಲಿಯೇ ನೋಡಿದರು. ಕಾಂಗ್ರೆಸ್ ಅಧಿವೇಶನ ಹಳ್ಳಿಗಳಲ್ಲಿ ನಡೆಯಬೇಕೆಂದರು. ಸರ್ಕಾರದ ವೆಚ್ಚ ಹಳ್ಳಿಗರ ಉತ್ಪತ್ತಿಗೆ ಅನುಸಾರವಾಗಿರಬೇಕೆಂದು ಬೋಧಿಸಿದರು. ಗ್ರಾಮೋದ್ಯೋಗ ಸಂಘ, ಮೂಲಶಿಕ್ಷಣ, ಗೋಸೇವೆ, ಹರಿಜನಸೇವೆ, ಗೊಬ್ಬರ ಶೇಖರಣೆ, ಅಧಿಕ ಆಹಾರ ಬೆಳೆ ಎಲ್ಲಾ ಚಟುವಟಿಕೆಗಳನ್ನೂ ಹಳ್ಳಿಗರ ಆವಶ್ಯಕತೆಯ ದೃಷ್ಟಿಯಿಂದಲೇ ಸೃಷ್ಟಿಸಿದರು. ತಾವೂ ಸಹ ಸೇವಾಗ್ರಾಮದಲ್ಲಿ ಕುಳಿತು ಖಾದಿ, ಗೋಸೇವೆ ಹಳ್ಳಿಯವರ ಆಹಾರ ಇವುಗಳ ಪ್ರಯೋಗವನ್ನು ಹದಿನೈದು ವರುಷಗಳಿಗಿಂತಲೂ ಹೆಚ್ಚಾಗಿ ನಡೆಸಿದರು. ವಾರ್ಧಾದಲ್ಲಿ ಮಗನ್‌ವಾಡಿಯಲ್ಲಿ ಗ್ರಾಮೋದ್ಯೋಗ ಸಂಘದ ಚಟುವಟಿಕೆಗಳು ನಡೆಯುತ್ತಿದ್ದವು. ಅಖಿಲ ಜಗತ್ತಿಗೆ ಆತ್ಮದ ಮಾರ್ಗದಲ್ಲಿ ಮಾರ್ಗದರ್ಶಕರಾಗಿ ಭಾರತ ಸ್ವಾತಂತ್ರ್ಯ ಸಂಗ್ರಾಮದ ನಾಯಕರಾಗಿದ್ದರೂ ಗಾಂಧಿಯವರ ಪ್ರತಿಯೊಂದು ಕಾರ್ಯದಲ್ಲಿಯೂ ಹಳ್ಳಿಯವರ ಹಿತವೇ ಅಡಕವಾಗಿದ್ದಿತು.

ಪಂಡಿತ ಜವಹರ್‌ಲಾಲರು ಹೇಳಿರುವಂತೆ "ಭಾರತದ ಜನತೆಯ ನಾಡಿ ಹೇಗೆ ಮಿಡಿಯುತ್ತಿದೆ" ಎಂಬುದು ಗಾಂಧಿಯವರಿಗೆ ಸ್ವಾಭಾವಿಕವಾಗಿ ಗೊತ್ತು. ಅವರು ಸತ್ಯಾಗ್ರಹಕ್ಕೆ ಉಪ್ಪಿನ ಕಾನೂನುಭಂಗವನ್ನು ಆರಿಸಿ ಕೊಂಡುದೂ ಹಳ್ಳಿಯವರ ಹಿತ ಅವರಿಗೆ ಗೊತ್ತಿದ್ದುದರಿಂದಲೇ. ಗಾಂಧಿ ಯವರು ಪ್ರಕೃತಿ ಚಿಕಿತ್ಸೆ, ಮಣ್ಣಿನ ಚಿಕಿತ್ಸೆ, ನೀರಿನ ಚಿಕಿತ್ಸೆ ಇವನ್ನೆಲ್ಲಾ ಅನುಸರಿಸುತ್ತಿದ್ದುದೂ, ತಲೆನೋವಿಗೆ ಕೆಮ್ಮಣ್ಣಿನ ಕೆಸರು ಅದ್ದಿದ ಅರಿವೆಯನ್ನು ಸುತ್ತುತ್ತಿದ್ದುದೂ, ರಾಮನಾಮವೇ ಸರ್ವೌಷಧವೆಂದು ಹೇಳಿದುದೂ ಹಳ್ಳಿ ಯವರು ಯಾವ ರೀತಿ ಬಾಳುತ್ತಿರುವರೆಂಬುದನ್ನು ತಿಳಿಸುವುದಕ್ಕಾಗಿಯೇ. ಸೊಳ್ಳೆಗಳ ಕಾಟದಿಂದ ತಪ್ಪಿಸಿಕೊಳ್ಳಲು ಗಾಂಧಿ ಒಂದು ಸಲ ಮುಖಕ್ಕೆಲ್ಲ ಸೀಮೆಎಣ್ಣೆ ಬಳಿದುಕೊಂಡು ಮಲಗಿದರು. "ಹಳ್ಳಿಯವರೆಲ್ಲಾ ಸೊಳ್ಳೆ ಪರದೆ ಎಲ್ಲಿಂದ ತಂದಾರು? ನಾನೂ ಅವರಂತೆ ಇರಬೇಕು" ಎಂದರು. ಗಾಂಧಿ ಯವರು ಹಲ್ಲಿನ ಬ್ರಷ್ ಅಂಟುಗಳನ್ನು ಬಿಟ್ಟು ಬೇವಿನ ಕಡ್ಡಿಯಲ್ಲಿ ಹಲ್ಲುಜ್ಜು ತ್ತಿದ್ದದೂ, ಸಾಬೂನನ್ನು ಬಿಟ್ಟು ಹಳ್ಳಿಯ ಕತ್ತಿಯಲ್ಲಿಯೇ ಕ್ಷೌರಮಾಡಿ ಕೊಳ್ಳುತ್ತಿದ್ದದೂ, ಅವರು ಹಳ್ಳಿಗರೊಂದಿಗೆ ಒಂದಾಗಿದ್ದುದರ ಕಾರಣದಿಂದಲೇ. ಒಂದು ಸಲ ಆಶ್ರಮದಲ್ಲಿ ಅವರು ಕುಳಿತು ಪ್ರಾರ್ಥನೆ ಮಾಡುತ್ತಿದ್ದ ಸ್ಥಳಕ್ಕೆ ಸಂಧ್ಯಾಕಾಲದ ಬಿಸಿಲು ಬಂದು ಅವರ ಮುಖದ ಮೇಲೆ ಸರಿಯಾಗಿ ಬೀಳು ತ್ತಿದ್ದಿತು. ಅದನ್ನು ಸ್ವಲ್ಪ ಮರೆಮಾಡಿ ಎಂದು ಗಾಂಧಿ ಅನುಯಾಯಿಗಳಿಗೆ ಹೇಳಿದರು. ಕೂಡಲೇ ಒಬ್ಬ ಬಡಗಿ ಬಂದ. ಅವನ ಅರ್ಧ ದಿನದ ಕೆಲಸ, ಎರಡು ಮೂರು ರೂಪಾಯಿ ಖರ್ಚಾಯಿತು. ತನಗಾಗಿ ಇಷ್ಟು ಖರ್ಚಾಯಿ ತಲ್ಲ! ಈ ಮಾತನ್ನು ನಾನು ಯಾಕೆ ಹೇಳಿದೆ? ಆ ರಂಧ್ರಕ್ಕೆ ಒಂದು ಗೋಣಿ ಹರಕನ್ನು ಮುಚ್ಚಿದ್ದರೆ ಆಗುತ್ತಿದ್ದಿತಲ್ಲ! ಬಡವರ ಪ್ರತಿನಿಧಿ ಎಂದು ಕೊಳ್ಳುವ ನಾನು ಹೀಗೆ ಖರ್ಚು ಮಾಡಬಹುದೇ ಎಂದು ಗಾಂಧಿ ಕೊರಗಿ ದರು. ತಾವು ಮಾಡಿದುದು ತಪ್ಪು ಎಂದು ಬಹಿರಂಗ ಸಭೆಯಲ್ಲಿ ಹೇಳಿಕೊಂಡರು. ಬಹಿರಂಗವಾಗಿ ಹೇಳಿಕೊಂಡು ಪಶ್ಚಾತ್ತಾಪ ಪಡದೆ ಪಾಪಕ್ಕೆ ಪ್ರಾಯಶ್ಚಿತ್ತ ವಿಲ್ಲವೆಂದು ಗಾಂಧಿ ಒತ್ತಿ ಒತ್ತಿ ಹೇಳಿದ್ದಾರೆ. ಇಲ್ಲಿಂದ ಇಂಗ್ಲೆಂಡಿಗೆ ದುಂಡುಮೇಜು ಪರಿಷತ್ತಿಗೆ ಹೋಗುವಾಗಲೂ ಅವರು ಮೂರನೇ ತರಗತಿ ಯಲ್ಲಿಯೇ ಹೋದರು. ಅಲ್ಲಿ ಕೂಲಿಗಳ ನಿವಾಸದಲ್ಲಿ ಇಳಿದುಕೊಂಡರು. ಬಡವರೊಂದಿಗೆ ಒಂದಾದರು. ಹೋಗುವ ದಾರಿಯಲ್ಲಿ ದೇವಿ ಸರೋಜಿನಿ ನಾಯ್ಡು, ಮಾಳವ್ಯಜಿ, ಪ್ಯಾರಿಲಾಲ್, ಬಿರ್ಲ ಇವರು ನಾಗರಿಕವಾದ ಪೇಟೆಂಟ್ ಚರ್ಮದ ಕೈಚೀಲಗಳನ್ನೂ, ದೊಡ್ಡ ದೊಡ್ಡ ಸೂಟ್ ಬಾಕ್ಸ್‌ಗಳನ್ನೂ ಇಟ್ಟು

ಕೊಂಡುದನ್ನು ಕಂಡು “ಇಂತಹ ಧನಿಕರೊಂದಿಗೆ ಹೋಗಿ ನಾನು ಹೇಗೆ ತಾನೆ ಅಲ್ಲಿ ಬಡವರ ಪ್ರತಿನಿಧಿಯಾಗಿ ಬಂದಿದ್ದೇನೆಂದು ವಾದಿಸಲಿ?” ಎಂದು ಹೇಳಿ ಅವರ ಪದಾರ್ಥಗಳನ್ನೆಲ್ಲಾ ಏಡನ್ನಿನಿಂದ ಹಿಂದಕ್ಕೇ ತಳ್ಳಿದರು. ಹೀಗೆ ಬಡವರೊಂದಿಗೆ ಒಂದಾಗುವುದರಲ್ಲಿ ತಮ್ಮ ಮಹಿಮೆ ಅಥವ ಪ್ರಭಾವ ಧನಿಕರಲ್ಲಿ ಕಡಮೆಯಾದೀತೆಂದು ಗಾಂಧಿ ಹೆದರಲಿಲ್ಲ. ಮನಸ್ಸಿಗೆ ಸರಿಯೆಂದು ತೋರಿದುದನ್ನು ನಿರ್ಭಯವಾಗಿ ಮಾಡುವುದು ಆಡುವುದು ಅವರ ಸ್ವಭಾವ. ಒಂದು ಸಲ ಕಾಶೀ ವಿದ್ಯಾಪೀಠದಲ್ಲಿ ರಾಜ ಮಹಾರಾಜರುಗಳು ಮೈತುಂಬ ಗೊಂಬೆಗಳಂತೆ ಒಡವೆಗಳನ್ನು ಧರಿಸಿದುದನ್ನು ನೋಡಿ “ದರಿದ್ರರ ಈ ದೇಶದಲ್ಲಿ ಒಡವೆಗಳ ಈ ವಿಕಟ ನರ್ತನವ್ಯಾಕೆ? ಕಿತ್ತೊಗೆಯಿರಿ” ಎಂದರು. ನೆರೆದಿದ್ದ ರಾಜರಿಗೆಲ್ಲಾ ಅಸಮಾಧಾನವಾಯಿತು. ಶ್ರೀಮತಿ ಆನ್ನಿ ಬಿಸೆಂಟರಿಗೆ ಸಹ ಕೋಪಬಂತು.

ಸೇವಾಗ್ರಾಮವನ್ನು ನೋಡಿರುವವರಿಗೆ ಗಾಂಧಿ ಗುಡಿಸಲು ಹೇಗಿದೆ ಎಂಬುದು ಗೊತ್ತು. ಅದು ಹಳ್ಳಿಯವರಿಗೆ ಅರ್ಹವಾದ ಮನೆ. ಹಳ್ಳಿಯಲ್ಲಿ ಸಿಕ್ಕದ ಯಾವ ಪದಾರ್ಥವನ್ನೂ ಆ ಮನೆಗೆ ಉಪಯೋಗಿಸಿಲ್ಲ. ಟನ್ ಗಟ್ಲೆ ಸಿಮೆಂಟು ಕಬ್ಬಿಣ ಕಲ್ಲು ಜಲ್ಲಿಗಳಿಲ್ಲದೆ ಮನೆಯನ್ನೇ ಕಟ್ಟುವುದಕ್ಕಾಗುವುದಿಲ್ಲವೆಂಬ ಕಟ್ಟಡ ಭ್ರಾಂತರಿಗೆ ಅದು ದೊಡ್ಡ ಆಶ್ಚರ್ಯ. ಒಂದು ಸಲ ಗಾಂಧಿಯವರ ಗುಡಿಸಲಿನ ಗಳುಗಳ ಜೊಡ್ಡಿಗಳನ್ನು ಗೆದ್ದಲು ತಿಂದು, ಗುಡಿಸಲು ಗಾಂಧಿಯವರ ಮೇಲೆಯೇ ಹೇರಿಕೊಂಡಿತು. ಆಗ ಅನುಯಾಯಿಗಳು ಬೇರೆ ಮಂಗಳೂರು ಹೆಂಚಿನ ಕಟ್ಟಡ ಕಟ್ಟೋಣ ಎಂದರು. ಗಾಂಧಿಯವರು ‘ಭಾರತದ ೪೦ ಕೋಟಿಗೆ ಮಂಗಳೂರು ಹೆಂಚು ಎಲ್ಲಿ ಸಿಕ್ಕುತ್ತದೆ?’ ಎಂದು ಹೇಳಿ ಮತ್ತೆ ಆ ಗುಡಿಸಲನ್ನೇ ಮೊದಲಿನಂತೆ ಸ್ಥಾಪಿಸಿ ಅಲ್ಲಿಯೇ ವಾಸಿಸತೊಡಗಿದರು.

“ಹಳ್ಳಿಗಳಿಗೆ ಹಿಂದಕ್ಕೆ ಹೋಗಿ” ಎಂಬ ಮಂತ್ರವನ್ನು ಗಾಂಧಿಯವರು ಎಲ್ಲರ ಕಿವಿಗೂ ಬಿತ್ತಿದರು. ರಚನಾತ್ಮಕ ಕಾರ್ಯಕ್ರಮವೂ ಅದರ ಹದಿನೆಂಟು ಅಂಗಗಳೂ ಹಳ್ಳಿಗಳ ಉದ್ಧಾರವನ್ನೇ ಗುರಿಯಾಗಿಟ್ಟುಕೊಂಡಿದ್ದುವು. ಗಾಂಧಿಯವರು “ರೈತನೇ ರಾಷ್ಟ್ರದ ಅಧ್ಯಕ್ಷನಾಗಬಹುದು. ಕಾಂಗ್ರೆಸ್ ಅಧ್ಯಕ್ಷನಾಗಬಹುದು. ರೈತ ಪ್ರಧಾನವಾದ ಈ ದೇಶದಲ್ಲಿ ರೈತನು ಮಂತ್ರಿಯಾಗುವುದು ನ್ಯಾಯವಾಗಿದೆ. ಭಾರತ ಯೂನಿಯನ್‌ಗೆ ರೈತ ಅಧ್ಯಕ್ಷನಾದರೆ, ಪಂಡಿತ ಜವಹರ್‌ಲಾಲರು ಅವನ ಕಾರ್ಯದರ್ಶಿಯಾಗಬಹುದೆಂದು” ಸಹ ಹೇಳಿದ್ದಾರೆ. ಒಂದೆಡೆ “ಧನಿಕರೆಲ್ಲಾ ಹಣವನ್ನು ತಾವಾಗಿಯೇ ಹಳ್ಳಿಯ ಸೇವೆಗೆ ಕೊಡಿ” ಎಂದಿದ್ದಾರೆ. ಭೂಮಿಯನ್ನು ಉಳುವವನೇ ಒಡೆಯ ಎಂದಿದ್ದಾರೆ. ವಿದ್ಯಾವಂತರನ್ನು ಕುರಿತು “ಹಳ್ಳಿಯ ಕೆಲಸ ಎಂದರೆ ನಮಗೆ

ಭಯ. ಪಟ್ಟಣದವರಿಗೆ ಹಳ್ಳಿಯ ವಾಸ ಕಷ್ಟವಾಗುತ್ತದೆ. ನಮ್ಮ ದೇಹ ಆ ಕಷ್ಟವನ್ನು ಒಪ್ಪುವುದಿಲ್ಲ. ಆದರೆ ನಮ್ಮ ಸ್ವರಾಜ್ಯ ನಿಜವಾದ ಸ್ವರಾಜ್ಯವಾಗ ಬೇಕಾದರೆ ನಾವು ಈ ಕಷ್ಟವನ್ನು ಎದುರಿಸಲೇ ಬೇಕು. ಇಲ್ಲದಿದ್ದರೆ ನಮ್ಮ ಸ್ವಾತಂತ್ರ್ಯ ಸ್ವರಾಜ್ಯವಾಗುವುದಿಲ್ಲ. ಒಂದು ಪಂಗಡದವರ ಆಳ್ವಿಕೆ ಹೋಗಿ ಮತ್ತೊಂದು ಪಂಗಡದವರ ಆಳ್ವಿಕೆಯಾಗುತ್ತದೆ ಮಾತ್ರ. ಆ ಆಳ್ವಿಕೆ ಮೊದಲಿನ ದಕ್ಕಿಂತ ಇನ್ನೂ ಕೆಟ್ಟದ್ದೇ ಆಗಬಹುದು. ಇದುವರೆಗೆ ಪಟ್ಟಣಿಗರಾದ ನಾವು ಬದುಕಲೆಂದು ಹಳ್ಳಿಯವರು ಸಹಸ್ರಾರು ಸಂಖ್ಯೆಯಲ್ಲಿ ಮಡಿದಿದ್ದಾರೆ. ಈಗ ಅವರು ಬದುಕಲೆಂದು ನಾವು ಮಡಿಯಬೇಕಾಗಿದೆ. ನಮ್ಮ ಈ ತ್ಯಾಗದಿಂದ ರಾಷ್ಟ್ರದ ಘನತೆ ಏರುವುದು. ಇದು ಈಗ ಆವಶ್ಯಕವಾದ ತ್ಯಾಗ. ಆತ್ಮ ಗೌರವವುಳ್ಳ ರಾಷ್ಟ್ರವಾಗಿ ನಾವು ಬಾಳಬೇಕಾದರೆ ಈ ತ್ಯಾಗದಿಂದ ನಾವು ಹಿಂಜರಿಯುವಂತಿಲ್ಲ" ಎಂದಿದ್ದಾರೆ.

ಇನ್ನು "ಗಾಂಧಿಯವರೂ ಗ್ರಾಮೋದ್ಧಾರವೂ" ಎಂಬುದು ಹಳೆಯ ವಿಷಯ. ಇದರ ಮೇಲೆ ಎಷ್ಟು ಬೇಕಾದರೂ ಹೇಳಬಹುದು. ಗಾಂಧಿ ಯವರು ಮುಖ್ಯವಾಗಿ ವ್ಯವಸಾಯ ಮತ್ತು ನೂಲುವುದಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದಾರೆ. ಕೃಷಿ ಪ್ರಧಾನವಾದ ನಮ್ಮ ದೇಶದಲ್ಲಿ ವ್ಯವಸಾಯವೂ ಒಂದು ಕೈಗಾರಿಕೆಯೇ. ಈ ಕೈಗಾರಿಕೆಯನ್ನು ಸ್ಪಷ್ಟವಾದ ನಿಯಮಿತವಾದ ಯೋಜನೆಯ ಮೇಲೆ ಕಟ್ಟಬೇಕು. ಕಳೆದ ವರುಷ ಇಂಗ್ಲೆಂಡಿನಲ್ಲಿ ಒಂದು ಲಕ್ಷ ಎಕರೆ ಭೂಮಿಯನ್ನು ಹೊಸದಾಗಿ ಗೋಧಿ ಸಾಗುವಳಿಗೆ ತಂದರು. ಈ ವರುಷ ಇನ್ನೊಂದು ಲಕ್ಷ ಎಕರೆಯನ್ನು ಕೃಷಿಮಾಡಿದ್ದಾರೆ. ಸರ್ಕಾರ ದವರು ಇದಕ್ಕಾಗಿಯೇ ಬೇರೆ ಸಿಬ್ಬಂದಿಗಳನ್ನು ನಿಯಮಿಸಿದ್ದಾರೆ. ಹೊರಗಿನ ಆಹಾರಕ್ಕೆ ಇಷ್ಟೊಂದು ಹಣ ತೆರುತ್ತಿರುವ ನಮ್ಮ ಸರ್ಕಾರಗಳು ರೈತನಿಗೆ ಇನ್ನೂ ಹೆಚ್ಚಾಗಿ ಸೌಲಭ್ಯಗಳನ್ನು ಕೊಟ್ಟರೆ ವ್ಯವಸಾಯದ ಪ್ರಶ್ನೆ ಬಹಳ ಮಟ್ಟಿಗೆ ಪರಿಹಾರವಾಗುವುದು.

ಗ್ರಾಮೋದ್ಧಾರದ ವಿಚಾರದಲ್ಲಿ ಮಾತನಾಡುತ್ತಾ ಗಾಂಧಿಯವರು "ನೂಲುವುದನ್ನು ಹೆಚ್ಚು ಹೆಚ್ಚಾಗಿ ಪ್ರಚಾರಮಾಡಿದರೆ ನನಗಂತೂ ಬಟ್ಟೆಯ ಕ್ಷಾಮದ ಕಾರಣ ಕಾಣುವುದಿಲ್ಲ"ವೆಂದಿದ್ದಾರೆ. ಈಗ ಭಾರತ ಸರ್ಕಾರ ಬಟ್ಟೆಯ ಹೆಚ್ಚಿಗೆ ತಯಾರಿಕೆಗೆ ಅಖಿಲ ಭಾರತ ಚರಖ ಸಂಘದ ಯೋಜನೆ ಗಳಾವುವು ಎಂದು ಚರಕಸಂಘವನ್ನು ಕೇಳಿದ್ದಾರೆ. ಮೈಸೂರಿನಲ್ಲಿ ಖಾದಿಯ ಬೆಳವಣಿಗೆ ಈಚೆಗೆ ಕುಂಠಿತವಾಗಿದೆ. ಕೆಲಸಗಾರರು ಅತೃಪ್ತರಾಗಿರುವಂತೆ ಕಾಣುತ್ತಿದೆ. ಈಗ ಸರ್ಕಾರ ಖಾದಿಯ ಉತ್ಪತ್ತಿಯನ್ನು ಹೆಚ್ಚಿಸಬೇಕು.

"ಖಾದಿ ತನ್ನ ಪಾಡಿಗೆ ತಾನು ಬೆಳೆಯುತ್ತೆ. ಇದಕ್ಕೆ ಪ್ರೋತ್ಸಾಹ ಬೇಕಿಲ್ಲ" ಎನ್ನುವ ಕೈಗಾರಿಕಾ ಅಧಿಕಾರಿಗಳಿಂದ ಪ್ರಯೋಜನವಿಲ್ಲ.

ಗ್ರಾಮೋದ್ಧಾರದ ಪ್ರಶ್ನೆ ಬಹಳ ಜಟಿಲವಾದುದು. ಇದರ ಪರಿಹಾರ ಮಾರ್ಗಕ್ಕೆ ಸಾರ್ವಜನಿಕರೂ ಪಟ್ಟಣಿಗರೂ ಹಳ್ಳಿಯವರೂ ಒಟ್ಟಾಗಿ ಪ್ರಯತ್ನಿಸಬೇಕು. ಮುಖ್ಯವಾಗಿ ಹಳ್ಳಿಯವರು ಹೆಚ್ಚು ಆತ್ಮಾಭಿಮಾನಿಗಳೂ ಕಷ್ಟಜೀವಿಗಳೂ ವಿದ್ಯಾವಂತರೂ ಆಗಬೇಕು. ಪಟ್ಟಣಿಗರಿಗೆ ಹಳ್ಳಿಯವರ ಕಷ್ಟ ಗೊತ್ತಾಗುತ್ತಿಲ್ಲ. ಹಳ್ಳಿಗಳಲ್ಲಿ ಜನಗಳೇ ಇಲ್ಲವೆಂಬುದೂ ಎಲ್ಲರೂ ಪಟ್ಟಣಗಳನ್ನೇ ಸೇರುತ್ತಿರುವರೆಂಬುದೂ ಅವರಿಗೆ ಗೊತ್ತಾಗುತ್ತಿಲ್ಲ. "ಹಳ್ಳಿಯವರು ಯಾಕೆ ಇನ್ನಷ್ಟು ಆಹಾರ ಬೆಳೆಯುತ್ತಿಲ್ಲ?" ಎಂದು ಪಟ್ಟಣಿಗರು ಕೋಪಿಸಿಕೊಳ್ಳುತ್ತಾರೆ. "ಪಟ್ಟಣಗಳಲ್ಲಿ ಕುಳಿತಿರುವವರ ಪೈಕಿ ಕೆಲವರಾದರೂ ಹಳ್ಳಿಗಳಿಗೆ ಬಂದು ಯಾಕೆ ಆಹಾರವಸ್ತುಗಳನ್ನು ಬೆಳೆಯುತ್ತಿಲ್ಲ" ಎಂದು ಹಳ್ಳಿಗರು ರೇಗುತ್ತಾರೆ. ಪ್ರತಿಸಲದ ಜನಗಣತಿಯಲ್ಲಿಯೂ ದೇಶದ ಜನಸಂಖ್ಯೆ ಹೆಚ್ಚುತ್ತಾ ಹೋದರೂ ಹಳ್ಳಿಗಳು ಬರಿದಾಗುತ್ತಿವೆ. ಪಟ್ಟಣದ ಕೈಗಾರಿಕೆಗೆ ದೊರೆಯುತ್ತಿರುವ ಪ್ರೋತ್ಸಾಹ, ಹಳ್ಳಿಯ ವ್ಯವಸಾಯಕ್ಕೆ ದೊರೆಯುತ್ತಿಲ್ಲ. ಮೊನ್ನೆ ಮದರಾಸು ಸರ್ಕಾರದ ಮುಖ್ಯ ಮಂತ್ರಿ ರಾಮಸ್ವಾಮಿ ರೆಡ್ಡಿಯವರು ಮಾತನಾಡುತ್ತಾ "ಯಾವ ಪುನರ್ವ್ಯವಸ್ಥೆಯಿಂದಲೂ ಕೈಗಾರಿಕೆಗೆ ಮಾತ್ರ ಸಹಾಯವಾಗುತ್ತಿದೆ. ಕೃಷಿಗೆ ಸಹಾಯವಾಗುತ್ತಿಲ್ಲ. ಇದನ್ನು ಮಾಡಿದ ಹೊರತು ಸರ್ಕಾರ ತನ್ನ ಕರ್ತವ್ಯ ನಿರ್ವಹಿಸಿದಂತೆ ಆಗುವುದಿಲ್ಲ. ಯಾವ ಮನುಷ್ಯನೂ ಪಟ್ಟಣದಲ್ಲಿ ಹೋಗಿ ಕುಳಿತರೆ ತೀರಿತು. ಅವನಿಗೆ ಆಹಾರ ಬಟ್ಟೆ ಬೆಳಕನ್ನು ಒದಗಿಸುವುದು ಸರ್ಕಾರದ ಕರ್ತವ್ಯವಾಗುತ್ತದೆ. ಈ ತತ್ವವೇ ಮುಂದುವರಿದರೆ ನಮ್ಮ ಪಟ್ಟಣಗಳು ಮಾತ್ರ ಬೆಳೆಯುತ್ತವೆ. ಎಲ್ಲರಿಗೂ ಅಮೆರಿಕ ಆಸ್ಟ್ರೇಲಿಯದಿಂದಲೇ ಆಹಾರವನ್ನು ತರಿಸಿ ಒದಗಿಸಬೇಕಾಗುತ್ತದೆ" ಎಂದಿದ್ದಾರೆ.

ಮಹಾತ್ಮಾ ಗಾಂಧಿಯವರು ಈ ವಿಷಯದಲ್ಲಿ ಹಳ್ಳಿಗಳಿಗೂ ಪಟ್ಟಣಗಳಿಗೂ ಮಧ್ಯಸ್ತಗಾರರಾಗಿದ್ದರು. ಅವರ ನಿಧನದಿಂದ ಹಳ್ಳಿಗರು ಇನ್ನೂ ಹೆಚ್ಚು ಅನಾಥರಾಗಿದ್ದಾರೆ. ಯಾರಿಗೆ ಮೊರೆ ಇಡಬೇಕೆಂಬುದು ಹಳ್ಳಿಗರಿಗೆ ತಿಳಿಯದಾಗಿದೆ. ಗಾಂಧಿಯವರ ಜನ್ಮದಿನದ ಈ ಪವಿತ್ರ ಸಮಯದಲ್ಲಿ ನಾವು ಮತ್ತೆ ಹಳ್ಳಿಗಳ ಉದ್ಧಾರದ ಪ್ರತಿಜ್ಞೆ ತೆಗೆದುಕೊಳ್ಳೋಣ. ಇದೇ ನಾವು ಅವರಿಗೆ ಸಲ್ಲಿಸುವ ಕಾಣಿಕೆ. ಸ್ವತಂತ್ರ ಭಾರತದಲ್ಲಿ ಪ್ರತಿಯೊಬ್ಬ ಪ್ರಜೆಯೂ ತನ್ನ ದೇಶಕ್ಕೆ ಅರ್ಪಿಸುವ ಉಚ್ಚ ಸೇವೆ ಇದೆ.

# ಗಾಂಧಿಜಿ ಮತ್ತು ಖಾದಿ

ಎಸ್. ವಿ. ರಂಗಣ್ಣ

ಖದ್ದರೆಂಬ ಪವಿತ್ರ ವಸನವಿಶೇಷ ಇಪ್ಪತ್ತೆಂಟು ವರ್ಷದ ಹಿಂದೆ ಹುಟ್ಟಿತು. ತಾತ್ಸಾರ, ಅಪಹಾಸ್ಯ, ಕಟುಟೀಕೆ, ನಿಂದೆ ಮುಂತಾದ ಅನಿವಾರ್ಯ ಸಾಮಾಜಿಕ ಜಾಡ್ಯಗಳನ್ನು ಕ್ರಮವಾಗಿ ಅಂತು, ಜಯಿಸಿಕೊಂಡಿತು. ಹಾಗೊ ಹೀಗೂ ಬೆಳೆಯುತ್ತ ಬಂದು ಈಗ ತನ್ನ ಕಾಲಿನಮೇಲೆ ಕೊಂಚ ಮಟ್ಟಿಗೆ ದೃಢವಾಗಿ, ಅಷ್ಟಿಷ್ಟು ಧೈರ್ಯದಿಂದ ನಿಂತು, ನಮ್ಮ ನಡುವೆ ತನ್ನ ಬಾಳನ್ನು ಬಾಳುತ್ತಿದೆ. ಖಾದಿಯನ್ನು ಸಮರ್ಥಿಸುವ ಕಾರಣಗಳನ್ನು ಬಿಚ್ಚಿ ಹೇಳಬೇಕೆ? ನೂಲು ತೆಗೆಯುವುದರಿಂದ ಬಡಹಳ್ಳಿಗನಿಗೆ ನಾಲ್ಕಾರು ಕಾಸಿನ ಹೆಚ್ಚು ಆದಾಯ ಉಂಟು; ರಾಟೆ ತಿರುಗಿಸುವ ಉಪಕಸಬಿನಲ್ಲಿ ಅವನ ವಾರಗಟ್ಟಲೆಯ ವಿರಾಮಕಾಲ ಸದ್ವಿನಿಯೋಗವಾಗುತ್ತದೆ; ಸುಲಭವಾಗಿ ಎಲ್ಲರೂ ಕಲಿಯಬಲ್ಲ ಹರ್ಷದಾಯಕ ಕೈಕೆಲಸ ಚರಕದ ಹವ್ಯಾಸ; ತಮ್ಮ ತಮ್ಮ ಸಲುವಾಗಿ ನೂಲುವ, ನೆಯ್ಯುವ ಅಭ್ಯಾಸ ಸ್ವಾವಲಂಬನವನ್ನು ಬೀರುತ್ತದೆ, ದುಡಿಮೆಯ ಘನತೆಯನ್ನು ಸಾರುತ್ತದೆ; ಇಂಗ್ಲಂಡಿನ ಭೇತಾಳ ಗಿರಣಿಗಳನ್ನು ಬೆದರಿಸಿ ಸಾಗರದಾಚೆ ಇರಿಸಲು ಚರಕವಲ್ಲವೆ ಉತ್ಕೃಷ್ಟ ರಕ್ಷಾಯಂತ್ರ? ಪರದೇಶಗಳಿಗೆ ಹರಿದು ಸೂರೆಯಾಗುವ ಲಕ್ಷೋಪಲಕ್ಷ ದ್ರವ್ಯ ನಮ್ಮಲ್ಲಿಯೇ ಉಳಿದಲ್ಲಿ ಭಾಗ್ಯೋನ್ನತಿಯಲ್ಲವೆ? ಅಲ್ಲದೆ ಖಾದಿ ತಯಾರಿಕೆ ಕಾಲದ ಮಾಯದಿಂದ ಖಿಲವಾಗಿದ್ದು ಈಗ ಪುನರುಜ್ಜೀವನಕ್ಕೆ ಅತ್ಯರ್ಹವಾದ ಪ್ರಖ್ಯಾತ ಪುರಾತನ ಉದ್ಯೋಗ:—ಈ ರೀತಿಯ ಪ್ರಬಲ ತರ್ಕದ ಮೂಲಕ ಖಾದಿಯನ್ನು ಇಂದು ಸ್ಥಾಪಿಸಬೇಕಾಗಿಲ್ಲ; ಹಲವಾರು ವ್ಯಕ್ತ ಉಪಯೋಗಗಳನ್ನು ನಿದರ್ಶಿಸಿ ಅದರ ಆವಶ್ಯಕತೆಯನ್ನು ಒತ್ತಿ ಹೇಳಬೇಕಾಗಿಲ್ಲ. ಅದನ್ನು ಭಾವಿಸಿ, ನಲಿದು, ಹಿಗ್ಗಿ, ವಂದಿಮಾಗಧರಂತೆ ಅದನ್ನು ನುತಿಗೈಯುವ ಅಗತ್ಯ ಇದೆಯೇ? ದಾಸ್ಯದ ಕರಾಳ ಸರಪಣಿಯನ್ನು ತುಂಡುತುಂಡುಮಾಡಿ ಹೊರಗೆಸೆಯುವ ಆಯುಧ ಅದು; ಆತ್ಮವಿಶ್ವಾಸವನ್ನು ಚೆನ್ನಾಗಿ ಪ್ರಚೋದಿಸಿ ನಮ್ಮ ಅಸ್ತಿತ್ವವನ್ನು ಸಮರ್ಪಕವಾಗಿ ಉಳಿಸಿಕೊಡುವ ದಿವ್ಯೌಷಧಿ ಅದು; ಹೆರವರ ವಂಚನೆ ನಮ್ಮ ಅಂಧತೆಗಳಿಂದ ಹರಿದು ಹಂಚಿ ಚೆಲ್ಲಾಪಿಲ್ಲಿಯಾಗಿ ಹೋಗಿರುವ ಭಾರತೀಯರನ್ನು ಒಟ್ಟುಗೂಡಿಸಿ, ದೊಡ್ಡ ಜನಾಂಗವಾಗಿಸುವ ಮಂಗಳ ಯೋಜನೆ ಅದು:—ಇಂಥ ಸ್ತುತಿಮಾತುಗಳನ್ನು ಎಲ್ಲರೂ ಕೇಳಿ

ಬಲ್ಲರು; ಇನ್ನು ಹೆಚ್ಚಿಗೆ ಬೇಡ. ಖದ್ದರು ಬಂದದ್ದಾಯ್ತು, ಖದ್ದರು ನಿಂದದ್ದಾಯ್ತು. ರಾಷ್ಟ್ರಜೀವನದ ಅಂಗಗಳಲ್ಲಿ ಒಂದು ಆಗಿಯೂ ಆಯ್ತು.

ಆದರೆ ಇಷ್ಟೇ ಸಾಕೆ? ಆರ್ಥಿಕ ರಾಜಕೀಯ ಸಾಮಾಜಿಕ ಕೊಂಚ ಮಾನಸಿಕ ತಕ್ಕಡಿಗಳಲ್ಲಿ ಖಾದಿಯನ್ನು ತೂಗಿ, ತೂಕ ಸೇರ್ಪಾಯ್ತೆಂದು ತೀರ್ಪಿತ್ತು, ತೃಪ್ತರಾದರೆ ಸಾಕೆ? ಕೇವಲ ಅಷ್ಟುಮಟ್ಟಿನ ಪ್ರತಿಕ್ರಿಯೆ ಖದ್ದರು ಕನ್ಯೆಯನ್ನು ಪಡೆದು, ಬೆಳೆಸಿ, ಭಾರತಜನತೆಯ ನಿಷ್ಕಲ್ಮಷ ಸೌಖ್ಯ ಶ್ರೇಯಸ್ಸಿಗಾಗಿ ಕಲ್ಯಾಣ ಮಾಡಿಕೊಟ್ಟ ಪೂಜ್ಯ ಗಾಂಧಿಜಿಗೆ ಸಮಂಜಸ ವಾದ ವಂದನಾರ್ಪಣವೆ? ಎಂಥ ಧರ್ಮವಿಚಾರವಾದರೂ ಬಹುಬೇಗ ಅದೊಂದು ವ್ಯಾಪಾರವಾಗಿ ಪರಿಣಮಿಸುವುದು ಅನೇಕ ದೇಶಗಳಲ್ಲಿ ಕಾಣ ಬರುವ ನಾಗರಿಕ ಲಕ್ಷಣ. ಇಂಡಿಯಾ ದೇಶದಲ್ಲೂ ಅಂಥ ಅಸಹ್ಯ ಪರಿವರ್ತನ ಇಲ್ಲದಿಲ್ಲ. ಆದರೂ ಯಾವ ವ್ಯಾಪಾರವಾದರೂ ಉನ್ನತ ವಿಶಾಲ ಧರ್ಮ ದೊಡನೆ ಮಿಳಿತವಾಗಿ ನಡೆಯಬೇಕೆನ್ನುವುದು ಭರತಮಾತೆಯ ಹೃದಯ, ಹೆಬ್ಬಯಕೆ. ಒಂದರ ಮೇಲೆ ಇನ್ನೊಂದು ಇಟ್ಟಿಗೆಯನ್ನಿಟ್ಟು ಗೋಡೆ ಕಟ್ಟುವ ಕೆಲಸವಾಗಲೀ, ನೂರಾರು ಕಾಗದ ವರದಿಗಳನ್ನು ಪರಿಶೀಲಿಸಿ ಆಜ್ಞೆಯಿತ್ತು ಆಡಳಿತ ನಡೆಸುವ ಅಧಿಕಾರವಾಗಲೀ, ಒಂದು ದೃಷ್ಟಿಯಲ್ಲಿ ಹೊಟ್ಟೆತುಂಬಲು ಕೂಲಿಹಣ ತರುವ ಜೀತ; ಇನ್ನೊಂದು ದೃಷ್ಟಿಯಲ್ಲಿ ಆತ್ಮೋದ್ಧಾರದ ಯಾಗ. ಎರಡನೆಯದೇ ಇಂಡಿಯದ ನಿರಂತರ ನಿಶ್ಚಲ ದರ್ಶನ; ಮಹಾತ್ಮ ಗಾಂಧಿಜಿಯ ಸುಸ್ಪಷ್ಟ ಪಾಠ. ಎಲ್ಲಿರಲಿ, ಏನನ್ನು ಮಾಡುತ್ತಿರಲಿ, ಆತ್ಮನೈರ್ಮಲ್ಯವನ್ನು ಕಾಪಾಡಿಕೊಳ್ಳುವುದು ಪ್ರತಿ ಭಾರತೀಯನ ಆದ್ಯ ಕರ್ತವ್ಯ ಎಂದಮೇಲೆ ಖದ್ದರೆಂಬುದಕ್ಕೆ ನಿಶ್ಚಯಾರ್ಥ ಯಾವುದು? ಹರಟೆ, ಆಲಸ್ಯ, ತುಂಟಾಟಗಳಿಗೆ ಬಿಡುವನ್ನು ಮುಡಿಪಾಗ ಕೊಡದೆ, ನೂಲುವುದಕ್ಕೂ ನೆಯ್ಯುವುದಕ್ಕೂ ಅದನ್ನು ಬಳಸುವುದು ಚಿತ್ತ ಸಂಯಮದ ಲಲಿತಸಾಧನೆ; ಮನಶ್ಶಾಂತಿಯ ಸರಲಸಂಪಾದನೆ. ನಯವಾಗಿ ಮೃದುವಾಗಿ ಬೆಲೆ ಕಡಮೆಯಾಗಿ ಚಿತ್ತಾಪಹಾರಕವಾದ ಬಟ್ಟೆಗಳನ್ನು ಬಿಟ್ಟುಕೊಟ್ಟು ಖಾದಿಯನ್ನು ಸದಾ ಉಪಯೋಗಿಸುವುದು ಮೆಚ್ಚಬಲ್ಲ ತ್ಯಾಗ; ಮರುಕ ದಯೆಗಳನ್ನು ಹೆಚ್ಚಿಸುವ ಸಹೋದರಪ್ರೇಮ; ಬಟ್ಟಾರೆ ಸತ್ಯದ ಕಾಪಿನಲ್ಲಿ ಜರುಗುವ ನಿಷ್ಕಪಟಜೀವನ. ಸಂಯಮ, ಶಾಂತಿ, ತ್ಯಾಗ, ಪ್ರೇಮ, ಸತ್ಯ—ಈ ಪಂಚತತ್ವಗಳ ಹೊಂದಾಣಿಕೆಯ ಸಂಕೇತವೇ ಖಾದಿ, ಅದೇ ಗಾಂಧಿ ಮಹಾತ್ಮ. ಖದ್ದರನ್ನು ಹೀಗೆಂದು ಬಳಸೋಣ. ಅದೇ ಮಹಾತ್ಮ ಗಾಂಧಿಜಿಗೆ ತಕ್ಕ ಪ್ರತಿಫಲ, ಇಂಡಿಯಾಕ್ಕೆ ತಕ್ಕ ಪೂಜೆ.

# ಮಹಿಳೆಯರನ್ನುದ್ದೇಶಿಸಿ

ಎಂ. ವಿ. ಲಕ್ಷ್ಮಿ

[ಗಾಂಧಿಜಯವರ *To the Women* ಎಂಬ ಪುಸ್ತಕಪರಿಚಯ]

ಗಾಂಧೀಜಿಯವರ ಹುಟ್ಟಿದ ದಿನದ ಸಂದರ್ಭದಲ್ಲಿ ಅವರು ಮಹಿಳೆಯರಿಗಿತ್ತ ಸಂದೇಶವನ್ನು ಕುರಿತು ಆಲೋಚಿಸುವುದು ನಮ್ಮ ಕರ್ತವ್ಯ. ಬಾಪೂಜಿ *To the Women* ಎಂಬ ಅವರ ಪುಸ್ತಕದಲ್ಲಿ ಮಹಿಳೆಯರ ಅನೇಕ ಸಮಸ್ಯೆಗಳ ಮೇಲೆ ತಮ್ಮ ಅಭಿಪ್ರಾಯ ಸೂಚಿಸಿ ಸೂಕ್ತ ಸಲಹೆಗಳನ್ನು ನೀಡಿದ್ದಾರೆ. ಅವರು ಉತ್ತರವಿತ್ತಿರುವ ಕೆಲವು ಪ್ರಶ್ನೆಗಳೆಂದರೆ ಸಮಾಜದಲ್ಲಿ ಸ್ತ್ರೀಗೆ ಸರಿಯಾದ ಮನ್ನಣೆ ದೊರೆಯದಿದ್ದಲ್ಲಿ ಆಕೆಯ ಕರ್ತವ್ಯವೇನು—ಓರ್ವ ಸಸ್ಯಾಹಾರಿ ಮಹಿಳೆಗೆ ಮಾಂಸಾಹಾರಿಯಾದ ಪತಿಯು ದೊರೆತರೆ ಆಕೆ ಯಾವರೀತಿ ನಡೆಯಬೇಕು—ಒಬ್ಬ ಹುಡುಗಿಯು ತನ್ನ ಇಷ್ಟಕ್ಕೆ ವಿರೋಧವಾಗಿ ವಿವಾಹವಾಗಬೇಕಾದಾಗ ಆಕೆ ಹೇಗೆ ವರ್ತಿಸಬೇಕು—ವಿಧವೆಯು ತನ್ನ ಸ್ಥಿತಿಯನ್ನು ಅನುಭವಿಸಲೇ ಬೇಕೆ ಅಥವಾ ಕಟ್ಟುನಿಬಂಧನಗಳನ್ನು ಒಡೆದು ತನ್ನ ಪುನರ್ವಿವಾಹದ ಹಕ್ಕನ್ನು ಸಾಧಿಸಬೇಕೇ—ಇವೇ ಮೊದಲಾದುವುಗಳು. ಹಿಂದೂ ಪತ್ನಿಯರ ವಿಚಾರವಾಗಿ ಬರೆಯುತ್ತಾ ಅವರು ಈ ರೀತಿ ತಿಳಿಸಿದ್ದಾರೆ: "ಹಿಂದೂ ಸಂಸ್ಕೃತಿಯು ಪತ್ನಿಯನ್ನು ಪತಿಗೆ ಸಂಪೂರ್ಣವಾಗಿ ಶರಣಾಗತಳಾಗುವಂತೆ ಮಾಡಿದೆ—ಇದರಿಂದ ಕೆಲವು ವೇಳೆ ಪುರುಷನು ತನ್ನ ಹೆಂಡತಿಯ ಮೇಲೆ ಪಶುವಿನಂತೆ ಅಧಿಕಾರವನ್ನು ಚಲಾಯಿಸುತ್ತಾನೆ." ಹೆಂಡತಿಯು ಹೋಗುತ್ತಿರುವ ದಾರಿಗೆ ಗಂಡನು ಅಡ್ಡಿ ಬಂದರೆ ಏನುಮಾಡಬೇಕೆಂಬ ಓರ್ವ ಮಹಿಳೆಯ ಪ್ರಶ್ನೆಗೆ ಗಾಂಧೀಜಿಯವರು ಸೀತಾ ಮೀರಾಬಾಯಿ ಇವರ ನಿದರ್ಶನಗಳನ್ನು ತಂದು ಮಹಿಳೆಗೆ ತಾನು ಹೋಗಲಿಚ್ಛಿಸುವ ಮಾರ್ಗ ಸರಿಯೆಂದು ತೋರಿದರೆ ಆಕೆ ಧೈರ್ಯವಾಗಿ ಮುನ್ನುಗ್ಗಬಹುದೆಂದು ಸಲಹೆ ಇತ್ತಿದ್ದಾರೆ. ಸ್ತ್ರೀಯರ ಅಂತಸ್ತಿನ ಮೇಲೆ ಒಂದು ಲೇಖನವಿದೆ. ಅದರಲ್ಲಿ ಬಾಪೂಜೀಯವರು "ಮಹಿಳೆಯರಿಗೆ ಪುರುಷರಷ್ಟೇ ಸಮಾನ ಹಕ್ಕುಬಾಧ್ಯತೆ

ಗಳು ಸಲ್ಲತಕ್ಕದ್ದು. ನಾನು ನನ್ನ ಗಂಡು ಮತ್ತು ಹೆಣ್ಣು ಮಕ್ಕಳನ್ನು ಒಂದೇ ದೃಷ್ಟಿಯಿಂದ ನೋಡುವೆನು" ಎಂದು ಅಭಿಪ್ರಾಯಪಟ್ಟಿದ್ದಾರೆ. ಮಹಿಳೆಯ ರನ್ನು 'ತ್ಯಾಗ ಮತ್ತು ಸಹಿಷ್ಣುತೆಯ ಮೂರ್ತಿಗಳು' ಎಂದು ಕರೆದಿದ್ದಾರೆ ಮಹಾತ್ಮರು—ಮುಂದೆ ಅವರು ಮಹಿಳೆಯರು ಹೇಗೆ ವರ್ತಿಸಬೇಕೆಂಬುದನ್ನು ವಿಶದಪಡಿಸಿದ್ದಾರೆ. 'ದೇವರ ಅತ್ಯಂತ ಪವಿತ್ರ ಕೃತಿಯಾದ ಸ್ತ್ರೀಯನ್ನು ನಮ್ಮ ಕಾಮಕ್ಕೆ ಬಲಿಕೊಡುವುದಕ್ಕೆ ಬದಲಾಗಿ ಇಡೀ ಪುರುಷವೃಂದವೇ ನಾಶ ವಾದರೂ ನಾನು ಕೊರಗುವುದಿಲ್ಲ ಎಂದು ತಿಳಿಸಿದ್ದಾರೆ' ಗಾಂಧೀಜಿ. ಅವರಿಲ್ಲಿ ತಮ್ಮ ಓರ್ವ ಮುಸಲ್ಮಾನ ಸ್ನೇಹಿತನ ಅನುಭವವೊಂದನ್ನು ವರ್ಣಿಸಿದ್ದಾರೆ. ಈ ಮುಸಲ್ಮಾನರು ಲಂಡನ್ನಿನಲ್ಲಿ ಒಂದು ಮಹಿಳಾ ಸಮಾರಂಭಕ್ಕೆ ಹೋಗಿ ದ್ದರು. ಇದನ್ನು ನೋಡಿ ಆಶ್ಚರ್ಯಪಟ್ಟ ಮಹಿಳೆಗೆ ಅವರು ಈರೀತಿ ತಿಳಿಸಿದ ರಂತೆ: "ನಾನಿಲ್ಲಿಗೆ ಬಂದಿದ್ದು ಮೂರು ಕಾರಣಗಳಿಂದ—ನಾನು ಚಿಕ್ಕ ಮಗುವಾಗಿದ್ದಾಗಲೇ ನಮ್ಮ ತಂದೆಯವರು ತೀರಿದುದರಿಂದ ನನ್ನ ಜೀವನ ದಲ್ಲೆಲ್ಲದಕ್ಕೂ ತಾಯಿಯೇ ಮೂಲ. ಎರಡನೆಯದಾಗಿ, ನನ್ನ ಪತ್ನಿಯು ನನ್ನ ಜೀವನದಲ್ಲಿ ನಿಜವಾದ ಸಹೋದ್ಯೋಗಿಯಾಗಿದ್ದಾಳೆ. ಕೊನೆಯದಾಗಿ, ನನಗೆ ಗಂಡುಮಕ್ಕಳಿಲ್ಲ—ನಾಲ್ಕು ಹೆಣ್ಣುಮಕ್ಕಳ ತಂದೆ ನಾನು." ಬೊಂಬಾ ಯಿನ ಭಗಿನಿ ಸಮಾಜದವರನ್ನುದ್ದೇಶಿಸಿ ಮಾಡಿದ ಭಾಷಣದಲ್ಲಿ ಮಹಾತ್ಮಾಜಿ "ಮಹಿಳೆಯು ಪುರುಷನ ಜೊತೆಗಾತಿ, ಆತನಷ್ಟೇ ಮೇಧಾಶಕ್ತಿಯುಳ್ಳವಳು ಆತನ ಕಾರ್ಯಕಲಾಪಗಳಲ್ಲೂ—ಹಕ್ಕುಬಾಧ್ಯತೆಗಳಲ್ಲೂ—ಒಟ್ಟುಗೂಡಿ ಶ್ರಮಿಸುವ ಅಥವಾ ನಲಿಯುವ ಹಕ್ಕು ಆಕೆಗೆ ಸಂಪೂರ್ಣವಾಗಿದೆ" ಎಂದು ತಿಳಿಸಿದರು. ಈ ಭಾಷಣದ ವಿಷಯ "ಮಹಿಳೆಯರ ಪುನರುಜ್ಜೀವನ" ವಾಗಿತ್ತು. "ಮಹಿಳೆಯ ಪಾತ್ರವೇನು" ಎಂಬುದನ್ನು ಮುಂದೆ ಚರ್ಚಿಸಿ ದ್ದಾರೆ. ಆಕೆಯು ಗೃಹಿಣಿ—ಆಕೆಯ ಕ್ಷೇತ್ರ ಮನೆ—ಇದನ್ನು ಮರೆತು ಆಕೆಯು ಪುರುಷನ ಸಮಕ್ಕೆ ಸ್ಪರ್ಧಿಸಲು ಹೊರಟರೆ ಇದು ಸ್ತ್ರೀ ಪುರುಷ ರಿಬ್ಬರಿಗೂ ಲಜ್ಜಾಸ್ಪದ ಮತ್ತು ಅನಾಗರಿಕತೆಯ ಕುರುಹು. ಇದು ಇಬ್ಬರನ್ನೂ ಕೆಳಕ್ಕೆಳೆಯುವುದು. ಅಹಿಂಸೆಯೆಂದರೆ ನಿರಂತರ ಪ್ರೇಮ. ಇದು ಮಹಿಳೆಯಲ್ಲ ಲ್ಲದೆ ಮತ್ತೆಲ್ಲದೆ. ತನ್ನ ಶಿಶುವನ್ನು ಹೊತ್ತು-ಹೆತ್ತು ಸಲಹಲು ಎಷ್ಟು ಕಷ್ಟ ಗಳನ್ನಾದರೂ ಸಂತೋಷದಿಂದ ಸಹಿಸುತ್ತಾಳೆ. ಈ ಮಾತೃತ್ವವನ್ನು—ಈ ಉಜ್ವಲಪ್ರೇಮವನ್ನು ಇಡೀ ಮಾನುಷವೃಂದಕ್ಕೆ ಧಾರೆಯೆರೆಯಲಿ. ಆಗ ಆಕೆ ಪುರುಷನ ಪಕ್ಕದಲ್ಲಿ ಶ್ರೇಷ್ಠ ಮಾತೃಸ್ಥಾನವನ್ನು ಆಕ್ರಮಿಸುವಳು. ಘೋರ ಯುದ್ಧಗಳಿಂದ ಪರಿತಪಿಸಿ ಕಂಗೆಟ್ಟಿರುವ ಜಗತ್ತಿನಲ್ಲಿ ಶಾಂತಿ ಅಮೃತವನ್ನೆರೆಯ

ಒಹುದು. ಇಲ್ಲಿ ಬಾಪೂಜೀಯವರು ಇನ್ನೊಂದು ದೃಷ್ಟಾಂತವನ್ನು ನಿರೂಪಿಸಿದ್ದಾರೆ. ಓರ್ವ ಸ್ತ್ರೀ ತನ್ನ ಮಗುವಿನ ಪ್ರಾಣದ ಸಲುವಾಗಿ ತಾನು chloroform ಸೇವಿಸಲು ಒಪ್ಪಲಿಲ್ಲ. ಇದರಿಂದ ಅವಳು ಒಂದು ಕಠಿಣ ಶಸ್ತ್ರಚಿಕಿತ್ಸೆಗೆ ಒಳಗಾಗಬೇಕಾಯಿತು. ಆ ಮಾತೃಪ್ರೇಮವೆ ಅವಳಿಗೆ ಆ ಸಮಯದಲ್ಲಿ ಶಕ್ತಿಯನ್ನು ಕೊಟ್ಟಿತು. ಅಹಿಂಸಾ ತತ್ವವನ್ನು ಆಚರಿಸುವುದಕ್ಕೆ ಪುರುಷರಿಗಿಂತ ಸ್ತ್ರೀಯರಿಗೆ ಹೆಚ್ಚು ಸುಲಭ. ಏಕೆಂದರೆ ಗಂಡಸಿಗೆ ಮೃಗದ ಹಾಗೆ ಶಕ್ತಿಯಿರಬಹುದು ಆದರೆ ಸ್ತ್ರೀಯರಲ್ಲಿ ಆತ್ಮ ಸಮರ್ಪಣೆಯ ಆಧ್ಯಾತ್ಮಿಕ ಧೈರ್ಯ ಅಡಗಿದೆ. ಅಹಿಂಸೆಯನ್ನು ಉನ್ನತ ಮತ್ತು ಶ್ರೇಷ್ಠತೆಯಲ್ಲಿ ಪ್ರದರ್ಶಿಸುವುದು ಮಹಿಳೆಯಿಂದ ಮಾತ್ರ ಸಾಧ್ಯ. ಇಟಲಿ ದೇಶದಲ್ಲಿ ಮಹಿಳೆಯರನ್ನುದ್ದೇಶಿಸಿ ಭಾಷಣಮಾಡುತ್ತ ಗಾಂಧೀಜಿಯವರು ಹೀಗೆ ತಿಳಿಸಿದರು: "ಅಹಿಂಸಾ ಯುದ್ಧದ ಒಂದು ಮಹತ್ವವೇನೆಂದರೆ ಇದರಲ್ಲಿ ಸ್ತ್ರೀಯರೂ ಪುರುಷರೂ ಸಮಾನ ಭಾಗವಹಿಸಬಹುದು. ಅಹಿಂಸಾ ಯುದ್ಧದಲ್ಲಿ ಸಹಿಷ್ಣುತೆಯು ಅತ್ಯವಶ್ಯಕ—ಮಹಿಳೆಯರು ಸ್ವಾಭಾವಿಕವಾಗಿ ಸಹಿಸಿಕೊಳ್ಳುವ ಶಕ್ತಿಯುಳ್ಳವರು."

ಸ್ತ್ರೀಯರನ್ನು ಅಬಲೆಯರೆಂದು ಕರೆಯುವುದು ಹೇಯವಾದುದೆ ಸರಿ. ದೈಹಿಕ ಬಲವು ಪುರುಷನಲ್ಲಿ ಹೆಚ್ಚಾಗಿರಬಹುದು ಆದರೆ ಆಧ್ಯಾತ್ಮಿಕ ಮತ್ತು ಮಾನಸಿಕ ಶಕ್ತಿಯಲ್ಲಿ ಸ್ತ್ರೀಯು ಪುರುಷನನ್ನು ಮೀರಿಸಿರುವಳು. ದಂಡಯಾತ್ರೆ ಕೈಗೊಂಡಾಗ ಬಾಪೂಜಿ ಮಹಿಳೆಯರಿಗಾಗಿ ಒಂದು ಮನವಿಯನ್ನು ಹೊರಡಿಸಿದರು. ಅದರಲ್ಲಿ ಅವರು "ಅಹಿಂಸೆಯು ನಮ್ಮ ಜೀವನದ ತತ್ವವಾದರೆ ಭವಿಷ್ಯವು ಮಹಿಳೆಯರಲ್ಲಿದೆ" ಎಂದು ತಿಳಿಸಿದ್ದಾರೆ. ತಮ್ಮ ಮೊಮ್ಮಗಳ ಮತ್ತು ಶ್ರೀ ಮಹದೇವ ದೇಸಾಯರ ಸಹೋದರಿಯ ವಿವಾಹಕಾಲದಲ್ಲಿ ಮಾತನಾಡುತ್ತ ಮಹಾತ್ಮಾಜಿಯವರು ದಂಪತಿಗಳು ಇಂದ್ರಿಯನಿಗ್ರಹ ಮತ್ತು ಆತ್ಮ ಸಂಯಮಗಳನ್ನು ಆಚರಿಸಬೇಕೆಂದು ಉಪದೇಶಿಸಿದರು. ವೈವಾಹಿಕ ಬ್ರಹ್ಮಚರ್ಯೆ ದಂಪತಿಗಳ ಧ್ಯೇಯವಾಗಿರಬೇಕೆಂಬುದು ಗಾಂಧೀಜಿಯವರ ಆಶಯವಾಗಿತ್ತು. ಜಾಫ್ನದ ಉದಿವಿಲ್ ಮಹಿಳೆಯರ ಕಾಲೇಜಿನಲ್ಲಿ ಭಾಷಣ ಮಾಡುತ್ತ ಅವರು "ಮಹಿಳೆಯರು ದಯಾಮೂರ್ತಿಗಳಾಗಿರಿ" ಎಂದು ತಿಳಿಸಿರುವರು. ನಾವು ವಿದ್ಯಾರ್ಜನೆ ಮಾಡುವುದು ಬರಿ ಬೊಂಬೆಗಳಂತಿರುವದಕ್ಕಲ್ಲ ಆದರೆ ದಯೆ-ಸಹನೆ ಇವುಗಳ ಪರಿಮಳವನ್ನು ಬೀರುವುದಕ್ಕೆ ಎಂದು ನಮ್ಮನ್ನು ಮರೆತು ಪರರ—ನಮಗಿಂತಲೂ ಬಡವರೂ ದುರ್ಭಾಗ್ಯರೂ ಆದವರ—ವಿಷಯದಲ್ಲಿ ಸಹಾನುಭೂತಿಯನ್ನು ತೋರುವೆವೊ ಅಂದು ನಮ್ಮಲ್ಲಿ ಕರುಣಾ ರಸವು ಉದ್ಭವಿಸುವುದು. ಪ್ರತಿಯೊಬ್ಬ ಹಿಂದೂ ಹುಡುಗಿಯೂ ಮದುವೆ

ಯಾಗುವುದಕ್ಕೋಸ್ಕರವೇ ಜನ್ಮವೆತ್ತಿಲ್ಲ. ಅನೇಕರು ಸೇವೆಗೋಸ್ಕರ ತಮ್ಮ ಜೀವನವನ್ನೇ ಮೀಸಲಾಗಿಟ್ಟಿದ್ದಾರೆ. ಗಾಂಧಿಜಿ ಬಾಲ್ಯವಿವಾಹವನ್ನು ಖಂಡಿಸಲು ಮರೆಯಲಿಲ್ಲ. ಇದು ನೈತಿಕ ಮತ್ತು ಭೌತಿಕ ಎರಡರಲ್ಲೂ ಕೇಡನ್ನುಂಟು ಮಾಡುತ್ತಿದೆ. ಬಾಲ್ಯವಿವಾಹವು ಎಂದಿಗೂ ಶಾಸ್ತ್ರಸಮ್ಮತವಲ್ಲ ಇದು ಶಾಸ್ತ್ರ ವಿರುದ್ಧವಾದದು. ಈ ತರಹ ಪದ್ಧತಿಗಳು ನಮ್ಮಲ್ಲಿರುವವರೆಗೂ ಸ್ವರಾಜ್ಯಸಾಧನೆ ಮಾಡಲಾರೆವು—ಏಕೆಂದರೆ ಸ್ವರಾಜ್ಯವೆಂದರೆ ಬರೀ ರಾಜಕೀಯದಲ್ಲಲ್ಲದೆ ನಾವು ಸರ್ವತೋಮುಖವಾಗಿ ಎಚ್ಚರಗೊಳ್ಳುವುದು. ಸಾಧಾರಣವಾಗಿ—೧೮ ವರ್ಷದೊಳಗಿರುವ ಹುಡುಗಿಗೆ ವಿವಾಹ ಮಾಡಬಾರದೆಂದು ಮಹಾತ್ಮಾಜಿಯವರ ಅಭಿಪ್ರಾಯ. ಬಾಲ್ಯವಿವಾಹದ ಬಹು ಮುಖ್ಯವಾದ ಒಂದು ಪರಿಣಾಮವೆಂದರೆ ಬಾಲವಿಧವೆಯರು. ೧೯೩೧ ನೇ Census Report ನ ಪ್ರಕಾರ ೧೦ ಮತ್ತು ೧೫ ವರ್ಷದೊಳಗಿನ ಹುಡುಗಿಯರಲ್ಲಿ ಸೇ. ೩೮.೧ ರಷ್ಟು ಮದುವೆಯಾದರು—ಆ ವರ್ಷದಲ್ಲಿ ೧೦ ಮತ್ತು ೧೫ ವಯಸ್ಸಿನಲ್ಲಿರುವ ಬಾಲವಿಧವೆಯರ ಸಂಖ್ಯೆ ೧,೮೫,೩೩೯ ಆಗಿತ್ತು. ಬಾಲ್ಯವಿವಾಹದಿಂದ ಅನೇಕ ತಾಯಂದಿರು ಪ್ರಸವಕಾಲದಲ್ಲಿ ಸಾಯುವರು. ೧,೦೦೦ ಕ್ಕೆ ೧೭೦ ರಂತೆ ಈತರಹ ಮರಣಹೊಂದುವರೆಂದು Sir John Thegaw ರವರು ತಿಳಿಸಿದ್ದಾರೆ. ತಾಯಿಗೆ ಮಾತ್ರವಲ್ಲದೇ ಮಗುವಿನ ಮೇಲೂ ಇದು ಪರಿಣಾಮಕಾರಿಯಾಗಿರುತ್ತದೆ. ನಮ್ಮ ದೇಶದಲ್ಲಿ ಹುಟ್ಟಿದ ಪ್ರತಿ ಸಾವಿರ ಮಕ್ಕಳಲ್ಲೂ ೧೮೧ ಸಾಯುವುವು. ಕೆಲವೆಡೆ ಈ ಸಂಖ್ಯೆ ೪೦೦ ಕ್ಕೆ ಕೂಡ ಏರುತ್ತದೆ. ತಮ್ಮ ಪುಸ್ತಕದಲ್ಲಿ ಬಾಪೂಜಿಯವರು ವಿಧವೆಯರ ಪ್ರಶ್ನೆಯನ್ನು ವಿಮರ್ಶಿಸಿದ್ದಾರೆ. ಪ್ರತಿಯೊಬ್ಬ ವಿಧವೆಗೂ ಪುನರ್ವಿವಾಹವಾಗಲೂ ವಿಧುರನಷ್ಟೇ ಹಕ್ಕಿದೆ. ಬಲತ್ಕಾರ ವೈಧವ್ಯ ಹಿಂದೂ ಮತಕ್ಕೆ ಒಂದು ದೊಡ್ಡ ಶಾಪ. ನಿಜವಾದ ಸತೀತ್ವವೆಂದರೆ ಪತಿಯ ಜೊತೆಯಲ್ಲಿ ಚಿತೆಗೇರುವುದಲ್ಲ ಆದರೆ ಜನ್ಮಾದ್ಯಂತವೂ ಪವಿತ್ರ ಪರಿಶುದ್ಧ ಜೀವನವನ್ನು ಸಾಗಿಸುವುದು. ನಿಜ ಸತಿಯು ತನ್ನ ಪತಿಯ ಧ್ಯೇಯ ಆದರ್ಶಗಳನ್ನು ತನ್ನ ಜೀವನದಲ್ಲಿ ಅನುಸರಿಸಿ—ಆತನ ಅಮರತ್ವವನ್ನು ಸಾಧಿಸುವಳು. ಪತೀತ್ವವು ಪವಿತ್ರ ಜೀವನದ ಅಂತರ. ಸಾಯುವುದರಿಂದ ಇದನ್ನು ಸಾಧಿಸಿದಂತಾಗುವುದಿಲ್ಲ. ಆತ್ಮಸಮರ್ಪಣೆ—ಆತ್ಮನಿಗ್ರಹ—ಇದರಿಂದ ಮಾತ್ರ ಸಾಧ್ಯ. ಸುಮ್ಮನೆ ಪತಿಯ ಜೊತೆಯಲ್ಲಿ ಪ್ರಾಣ ಬಿಡುವುದು ಬರೀ ಮೂರ್ಖತನ. ಇದು ಪತಿವ್ರತ ಧರ್ಮವಲ್ಲ—ಕೇವಲ ಆತ್ಮಹತ್ಯೆ. ಹಿಂದೂ ವಿಧವೆಯ ಸ್ಥಿತಿ ಅಸ್ಪೃಶ್ಯರಷ್ಟೇ ದುರಂತವಾಗಿದೆ. ಮದುವೆಯೆಂದರೇನು ಎಂದು ಅರಿಯದ ಹಸುಳೆಗೆ ವಿವಾಹಮಾಡಿ—ಆಮೇಲೆ

ಆವಳನ್ನು ವಿಧವೆಯೆಂದು ಕರೆಯುವುದು ಒಂದು ಪಾಪಕಾರ್ಯವೇ ಸರಿ. ಬಲತ್ಕಾರದಿಂದ ವಿಧವೆಯರಾಗಿ ಉಳಿದಿರುವ ನಮ್ಮ ಸಹೋದರಿಯರಿರುವ ವರೆಗೂ ನಾವು ನಮ್ಮನ್ನು ಪುರುಷರೆಂದೂ ಕರೆದುಕೊಳ್ಳುವುದು ಅವಮಾನ. ನಮ್ಮನ್ನು ನಾವು ಆಳುತ್ತೇವೆಂದು ಹೇಳುವುದಕ್ಕೂ ಅಧಿಕಾರವಿಲ್ಲ. ಇದು ನಮ್ಮ ದೇಶದ ಒಂದು ದೊಡ್ಡ ಕಳಂಕ—ಧರ್ಮವಲ್ಲ ಅಧರ್ಮ ಎಂದಿದ್ದಾರೆ ಬಾಪೂಜಿ.

ವಿವಾಹಪದ್ಧತಿಯನ್ನೆ ಸಂಪೂರ್ಣವಾಗಿ ರದ್ದುಗೊಳಿಸಬೇಕೆಂಬ ಪ್ರಶ್ನೆಗೆ ಉತ್ತರವಾಗಿ ಪೂಜ್ಯ ಬಾಪೂಜಿ ಹೀಗೆ ತಿಳಿಸಿದ್ದಾರೆ: "ವಿವಾಹವು ಧರ್ಮವನ್ನು ಕಾಪಾಡುವ ಒಂದು ಬೇಲಿ. ಈ ಬೇಲಿಯನ್ನು ನಾಶಗೊಳಿಸಿದರೆ ಧರ್ಮವು ಉಳಿಯುವುದಿಲ್ಲ. ಧರ್ಮದ ತಳಹದಿ ಸಂಯಮ—ವಿವಾಹವು ಸಂಯಮವಲ್ಲದೆ ಇನ್ನ್ಯಾವುದೂ ಅಲ್ಲ." Dr. Muthu Lakshmi Reddy ಯವರ ಪತ್ರವನ್ನು ಪ್ರಸ್ತಾಪಿಸುತ್ತಾ "ವಿದ್ಯಾವತಿಯರಾದ ಮಹಿಳೆಯರು ಮೂಢನಂಬಿಕೆಗಳಿಂದ ಪಾರಾಗಿ, ಸಮಾಜದ ಅನ್ಯಾಯಗಳನ್ನು ಅರಿತಿರುತ್ತಾರೆ. ಇಂತಹವರು ಸುಧಾರಣೆಯನ್ನು ಕೈಗೊಳ್ಳಬೇಕು". ಈ ಪುಸ್ತಕದಲ್ಲಿ ಮುಂದೆ ವ್ಯಭಿಚಾರದ ಸಮಸ್ಯೆಯನ್ನು ಗಾಂಧೀಜಿ ಚರ್ಚಿಸಿದ್ದಾರೆ. ಮನುಷ್ಯನ ಎಲ್ಲಾ ದುಷ್ಕೃತಿಗಳಲ್ಲೂ ಅತ್ಯಂತ ಹೇಯವಾದುದು ಇದು. ಮಹಿಳೆಯರು ನನಗೆ ಅಬಲೆಯರಲ್ಲ—ಅವರು ಮಾನವ ವೃಂದದ ಉತ್ತಮಾರ್ಧ. ಇದು ಒಂದು ಸಮಾಜದ ರೋಗ—"Moral leprosy" ಎಂದು ಕರೆದಿದ್ದಾರೆ ಬಾಪೂಜಿ. "ಮಹಿಳೆಯರಿಗೆ ಹಿತವಚನವನ್ನಾಡುತ್ತಾ ಭಾರತದ ಭವಿಷ್ಯವು ನಿಮ್ಮ ಕೈಲಿದೆ ಏಕೆಂದರೆ ಮುಂದಿನ ಜನಾಂಗವು ನಿಮ್ಮನ್ನನುಸರಿಸುತ್ತದೆ. ಸಹಸ್ರಾರುಮಂದಿ ಅರೆಹೊಟ್ಟೆಯಲ್ಲಿ ಜೀವಿಸಬೇಕಾಗಿರುವ ಈ ದೇಶದಲ್ಲಿ ಆಭರಣಗಳನ್ನು ಧರಿಸುವುದು ಬಹಳ ತಪ್ಪು. ಪ್ರಪಂಚದ ವಿಷಯಗಳಲ್ಲಿ ನಾವು ನಮ್ಮ ನಿಜಪಾತ್ರವನ್ನು ವಹಿಸಬೇಕಾದರೆ—ಕೇವಲ ಪುರುಷನ ಆಕರ್ಷಣೆಗೋಸ್ಕರವೇ ಮಾಡುವ ಈ ಅಲಂಕಾರಗಳನ್ನು ತ್ಯಜಿಸಬೇಕು. ಸ್ತ್ರೀಗೆ ನಿಜವಾದ ಅಲಂಕಾರ—ಆಭರಣಗಳು, ಆಕೆಯ ನಡವಳಿಕೆ—ಮತ್ತು ಪವಿತ್ರತ್ವ. ಲೋಹ ಮತ್ತು ಕಲ್ಲುಗಳು ಎಂದಿಗೂ ನಿಜವಾದ ಆಭರಣಗಳಾಗವು" ಎಂದು ಹೇಳಿದ್ದಾರೆ. ಮಹಾತ್ಮಾಜಿಯವರು ತಮ್ಮ ಹರಿಜನ ಪ್ರವಾಸದಲ್ಲಿ ಅನೇಕ ಮಹಿಳಾಸಭೆಗಳನ್ನುದ್ದೇಶಿಸಿ 'ಮಹಿಳೆಯರು ಮತ್ತು ಅಸ್ಪೃಶ್ಯತೆ' ಎಂಬ ವಿಷಯದಮೇಲೆ ಮಾತನಾಡಿದ್ದಾರೆ: "ಅಸ್ಪೃಶ್ಯತೆಯನ್ನು ನಿಮ್ಮ ಹೃದಯದಿಂದ ಬೇರುಸಹಿತ ಕಿತ್ತುಹಾಕಿರಿ ಹರಿಜನರ ಮಕ್ಕಳನ್ನು ನಿಮ್ಮ ಮಕ್ಕ

ಳೆಂದೇ ಭಾವಿಸಿ—ಸೇವೆ ಸಲ್ಲಿಸಿರಿ. ಸ್ತ್ರೀಯನ್ನು ಸೇವೆ ಮತ್ತು ತ್ಯಾಗದ ಆರಾಧ್ಯಮೂರ್ತಿಯೆಂದು ನಾನು ಭಾವಿಸುತ್ತೇನೆ.

ಬಾಪೂಜಿಯವರು ಇನ್ನು ನಮಗೆ ಸಂದೇಶಗಳನ್ನು ಕೊಡುವುದಿಲ್ಲ. ಇದರಿಂದ ಈವರೆಗೆ ಹೇಳಿರುವ ಹಿತನುಡಿಗಳು ಬಹಳ ಅಮೂಲ್ಯವಾಗಿರುತ್ತವೆ. ಅವರ ಸಂದೇಶವನ್ನು ಅರಿತು ನಾವು ಅವರ ಆದರ್ಶಗಳನ್ನು ನಮ್ಮ ಜೀವನದಲ್ಲಿ ಆಚರಿಸಿದರೆ ಅವರ ಸಂದೇಶವು ಸಾರ್ಥಕವೆನಿಸುವುದು. ಎಲ್ಲಿಯವರೆಗೆ ನಾವು ಅವರ ಧ್ಯೇಯಗಳನ್ನು ಪಾಲಿಸಿ—ಅವರಿಗೆ ಪ್ರಿಯವಾದ ಸುಧಾರಣೆಗಳನ್ನು ಕೈಗೊಳ್ಳುವೆವೋ ಅಲ್ಲಿಯವರೆಗೆ ಮಹಾತ್ಮಾ ಗಾಂಧೀಜಿಯವರು ಅಮರ ಜ್ಯೋತಿಯಾಗಿ ನಮ್ಮ ಮಧ್ಯದಲ್ಲಿರುವರು. ನಮ್ಮ ಹೃದಯಗಳಲ್ಲಿ, ನಮ್ಮ ಕಾರ್ಯಗಳಲ್ಲಿ, ನಮ್ಮ ರಾಷ್ಟ್ರೀಯ ಮತ್ತು ವ್ಯಕ್ತಿಜೀವನ ರಚನೆಯಲ್ಲಿ ನಾವು ಅವರ ಸಂದೇಶವನ್ನು ನೆನಪಿನಲ್ಲಿಟ್ಟರೆ ಬಾಪೂಜೀಯವರು ನಮ್ಮಗಳೆಲ್ಲರ ಆತ್ಮ ಸಿಂಹಾಸನದಲ್ಲಿ ಚಿರಂಜೀವಿಯಾಗಿ ನೆಲಸುವರು.



V

# ಮಹಿಳೆಯರಿಗೆ ಮಹಾತ್ಮರ ಸಂದೇಶ

ಶ್ರೀಮತಿ ಸರೋಜಮ್ಮ

ಭಾರತದ ಪೂಜ್ಯಪಿತಾಮಹನೂ, ವಿಶ್ವಪೂಜಿತನೂ ಆದ ಮಹಾತ್ಯಾಗಿ ಬಾಪೂಜಿಯವರ ೮೦ ನೆಯ ಜನ್ಮೋತ್ಸವವನ್ನು ನಾವು ಈಗ್ಗೆ ಕೆಲವು ದಿನಗಳಿಂದ ಆಚರಿಸುತ್ತಿದ್ದೇವೆ. ಪ್ರತಿವರ್ಷದ ಈ ನಾಡಿನ ಹಬ್ಬಕ್ಕಿಂತ ಈ ಸಾರಿಯ ಜನ್ಮೋತ್ಸವವು ಒಂದು ಬಗೆಯ ಮಿಶ್ರಿತ ದುಃಖ ಮತ್ತು ಆನಂದಗಳಿಂದ ತುಂಬಿದೆ (ಕೂಡಿದೆ). ಇದುವರೆವಿಗೆ ನಾವು ಗಾಂಧೀಜಿಯ ಜೀವಿತದಲ್ಲಿಯೇ ಅವರ ಹುಟ್ಟಿದ ಹಬ್ಬವನ್ನು ಆಚರಿಸುತ್ತಿದ್ದೆವು. ಆದರೆ ಒಬ್ಬ ಹುಚ್ಚುಮನುಷ್ಯನ ಅಮಾನುಷ ಕೃತ್ಯದಿಂದ ನಾವು ಆ ವಿಭೂತಿ ಪುರುಷನನ್ನು ಕೇವಲ ಕೆಲವು ತಿಂಗಳುಗಳ ಹಿಂದೆ ಕಳೆದುಕೊಂಡೆವು. ಆದರೆ ನಾವು ನಮ್ಮ ಜೀವಿತದ ಒಂದು ದೀವಿಗೆಯನ್ನು ಕಳೆದುಕೊಂಡೆವೆಂದು ದುಃಖಿಸಬಾರದು. ಮಹಾತ್ಮನು ಈ ಪ್ರಾಪಂಚಿಕ ಜೀವಿತವನ್ನು ಬಿಟ್ಟುಹೋದರೂ, ಆತನು ಯಾವ ಉನ್ನತ ಧ್ಯೇಯಗಳಿಗಾಗಿ ಬದುಕಿ ಜೀವಿಸಿದನೋ, ಯಾವ ಕಷ್ಟ ಮತ್ತು ಅಗಣಿತ ಕಾರ್ಯಗಳನ್ನು ಸಾಧಿಸಿದನೋ, ಯಾವ ದರಿದ್ರನಾರಾಯಣನನ್ನು ಆರಾಧಿಸಿದನೋ, ಅವೆಲ್ಲವೂ ಅಮರವಾಗಿ ನಿಂತಿವೆ. ಮತ್ತು ಈ ಸಂದರ್ಭದಲ್ಲಿ ಆ ಮಹೋನ್ನತ ಕಾರ್ಯಗಳಿಗೆ ನಮ್ಮೆಲ್ಲರ ಹೃತ್ಪೂರ್ವಕವಾದ ಸಹಾಯದ ಪಣತೊಡೋಣ. ಮತ್ತು ಆತನು ತನ್ನ ಪ್ರಿಯವಾದ ಕಾರ್ಯಗಳನ್ನು ಎಲ್ಲಿ ನಿಲ್ಲಿಸಿದನೋ ಅಲ್ಲಿಂದ ನಾವು ಮುಂದುವರೆಯೋಣ.

ನಾನು ಈದಿನ "ಮಹಿಳೆಯರಿಗೆ ಮಹಾತ್ಮರ ಸಂದೇಶ" ಎಂಬ ವಿಷಯವಾಗಿ ಕೆಲವು ಮಾತುಗಳನ್ನಾಡುತ್ತೇನೆ. ಗಾಂಧೀಜಿಯವರ ಜೀವಿತದಲ್ಲಿ ಮಹಿಳೆಯರಿಗೆ ಒಂದು ಅಮೂಲ್ಯವಾದ ಸ್ಥಾನವಿತ್ತು. ಅವರ ಮಾತುಗಳಲ್ಲೇ ಹೇಳಬೇಕಾದರೆ ಒಬ್ಬ ಮನುಷ್ಯನಿಗೇ ಆಗಲಿ, ಒಂದು ದೇಶಕ್ಕೇ ಆಗಲಿ ಮಂಗಳವಾಗಬೇಕಾದರೆ, ಸತ್ಯ ಮತ್ತು ಅಹಿಂಸಾಪರಿಪಾಲನೆಯೊಂದೇ ಮಾರ್ಗ, ಆದರೆ ಇಂತಹ ಪರಿಪಾಲನೆಯಲ್ಲಿ ಮಹಿಳೆಯೇ ನಾಯಕಿಯಾಗಿ ಮಾನವಜನ್ಮವನ್ನು ಪಾವನಗೊಳಿಸಬೇಕು. ತಾನು ಗಂಡಸಿಗಿಂತ ಕೀಳೆಂಬ ಮನೋಭಾವನೆಯನ್ನು ಬಿಡಬೇಕು. ಆಗಲೇ ನಮ್ಮ ಸಮಾಜಕ್ಕೂ

ದೇಶಕ್ಕೂ ಮಂಗಳ. ನಮ್ಮ ದೇಶಕ್ಕೇ ಏಕೆ ವಿಶ್ವಕ್ಕೇ ಮಂಗಳವಾಗುವುದು. ಸತ್ಯಾಗ್ರಹವು ಅಬಲೆಯರ ಅಸ್ತ್ರವೆಂಬುದು ಒಂದು ಮೂಢನಂಬಿಕೆ. ಕಂಡವರಿಗೆ ಅದು ಅಬಲೆಯರ ಅಸ್ತ್ರವಾದರೂ, ಅದನ್ನು ಪರಿಗ್ರಹಿಸಿದವರಿಗೆ ಅದರಲ್ಲಿನ ಮಹಾತ್ಯಾಗವೂ ಕಷ್ಟಗಳೂ ಕಂಡುಬರುವುವು. ಈ ಬಗೆಯ ಕಷ್ಟ ಸಹಿಷ್ಣುತೆ ಮತ್ತು ತ್ಯಾಗಕ್ಕೆ ಮಹಿಳೆಯೇ ಬಹಳ ವಿಧದಲ್ಲಿ ಗಂಡಸರಿಗಿಂತ ಮೇಲಾಗಿರುವಳು. ಅದು ಎಲ್ಲರಿಗೂ ತಿಳಿದ ವಿಷಯವೇ. ಸ್ವಾತಂತ್ರ್ಯದ ಸಂಗ್ರಾಮದಲ್ಲಿ ಭಾರತದ ಸ್ತ್ರೀಯರು ಅನುಭವಿಸಿದ ಅಪಾರ ಕಷ್ಟಗಳು ಮತ್ತು ಅವರು ಸ್ವಯಂಪ್ರೇರಣೆಯಿಂದ ಮಾಡಿದ ಅಪಾರ ತ್ಯಾಗಗಳೂ ವಿಶ್ವವನ್ನೇ ಆಶ್ಚರ್ಯಗೊಳಿಸಿವೆ. ನಮ್ಮ ದೇಶದ ಅಹಿಂಸಾತ್ಮಕ ಯುದ್ಧದಿಂದ ಪಾಶ್ಚಾತ್ಯ ದೇಶಗಳು ದೊಡ್ಡ ಪಾಠವನ್ನೇ ಕಲಿಯಬೇಕಾಗಿದೆ. ಇಂದಾಗಲಿ ಎಂದಾಗಲಿ ಪಾಶ್ಚಾತ್ಯ ದೇಶಗಳು ಅಹಿಂಸಾತ್ಮಕ ರೂಪವನ್ನು ತಾಳಿದರೆ, ಅದು ಅಲ್ಲಿನ ಮಹಿಳೆಯರಿಂದಲೇ ಸಾಧ್ಯ. ಅದು ಎಲ್ಲರಲ್ಲೂ ಮನದಟ್ಟಾಗಲಿ. ಅವರೇನಾದರೂ ಒಗ್ಗಟ್ಟಿನಲ್ಲಿ ಒಮ್ಮನಸ್ಸಿನಲ್ಲಿ ಒಂದು ಬಗೆಯ ಮಾನಸಿಕ ಪ್ರಯೋಗದಿಂದ ತಮ್ಮ ಗಂಡಸರನ್ನೆಲ್ಲಾ ಅಹಿಂಸಾತ್ಮಕವಾಗಿ ಪರಿವರ್ತನಗೊಳಿಸಿದರೆ ಇಡೀ ಪಾಶ್ಚಾತ್ಯ ಜನಗಣವೇ ತಮ್ಮ ಯುದ್ಧ ನೀತಿಗಳನ್ನೂ ಅಮಾನುಷ ಬಳಸಂಚುಗಳನ್ನೂ ಒಂದು ಮೂಲೆಗಿಟ್ಟು ಪಾವನವಾಗುತ್ತಾರೆ. ಈ ರೀತಿಯಾಗಿ ಗಾಂಧೀಜಿಯವರು ಕೆಲವು ವರ್ಷಗಳ ಹಿಂದೆ ಹೇಳಿರುವರು. ಅವರ ಆಸೆ ಏನಾದರೂ ಫಲಿಸಿದಲ್ಲಿ, ವಿಶ್ವಶಾಂತಿ ಬಿತ್ತರಿಸಿದಂತೆಯೇ ಸರಿ. ಆದರೆ ಈಗ ಯೂರೋಪಿನಲ್ಲಿ ನಡೆಯುತ್ತಿರುವ ಕುಟಿಲಯುಕ್ತಿ ಸಮಾರಾಧನೆಗಳನ್ನು ನೋಡಿದರೆ ಆ ದಿನವು ಬರುವದೋ ಇಲ್ಲವೋ ಎಂಬ ಒಂದು ಸಂದೇಹವು ಮೂಡುತ್ತದೆ. ಆದರೆ ಒಂದು ಪ್ರಳಯವು ಬಂದಾದರೂ, ಆ ಮೂಢಜನರಿಗೆ ಒಂದು ಜ್ಞಾನೋದಯವಾಗುವುದೆಂದು ನಂಬೋಣ. ಅದಕ್ಕಾಗಿ ದೇವರನ್ನು ಪ್ರಾರ್ಥಿಸೋಣ.

ಸ್ತ್ರೀಯು ಗಂಡಸಿನ ಅಧಿಕೃತಳು, ಆತನ ದಾಸಿ ಎಂಬ ಒಂದು ಪ್ರಾಚೀನ ಹವ್ಯಾಸವು ಎಷ್ಟು ಬೇಗ ತೊಲಗಿದರೆ ಅಷ್ಟೂ ಒಳ್ಳೆಯದು ಎಂದು ಗಾಂಧೀಜಿಯವರು ಪದೇ ಪದೇ ಹೇಳಿರುವರು.

ಒಂದು ದೇಶವೇ ಆಗಲಿ, ಒಬ್ಬ ಮನುಷ್ಯನೇ ಆಗಲಿ, ಮತ್ತೊಂದು ದೇಶವನ್ನಾಗಲೀ ಒಬ್ಬ ಮಹಿಳೆಯನ್ನಾಗಲಿ ತನ್ನ ಅಧೀನಕ್ಕೊಳಪಡಿಸಿಕೊಂಡು ನಿರಂಕುಶಾಡಳಿತವನ್ನು ಚಲಾಯಿಸುವುದು ಒಂದುಬಗೆಯ ಅಸಂಸ್ಕೃತಿಯನ್ನು ತೋರಪಡಿಸುವುದೇ ಹೊರತು ಮತ್ತೇನೂ ಅಲ್ಲ.

ಗಾಂಧೀಜಿಯವರು ಒಂದುಕಡೆ ಹೇಳಿರುವಂತೆ "ಗಂಡಸೂ ಹೆಂಗಸೂ ದೇವರ ಸೃಷ್ಟಿಯಲ್ಲಿ ಸಮಾನರು, ಮತ್ತು ದೈಹಿಕಕೃತಿಯಲ್ಲಿ ಸಮಾನರು. ಆದುದರಿಂದ ಅವರಿಬ್ಬರ ಪ್ರತಿಯೊಂದು ಸಮಸ್ಯೆಯೂ ಒಂದೇ ಆಗಿದೆ. ಅವರಿಬ್ಬರನ್ನೂ ದೇವರು ಅವರಿಬ್ಬರಿಗಾಗಿ ಸೃಷ್ಟಿಸಿದ್ದಾನೆ. ಹೆಂಗಸು ಗಂಡಸಿಗಾಗಿಯೂ, ಗಂಡಸು ಹೆಂಗಸಿಗಾಗಿಯೂ ಹುಟ್ಟಿದ್ದಾರೆ. ಒಬ್ಬರು ಇನ್ನೊಬ್ಬರನ್ನು ಬಿಟ್ಟರೆ ಅದು ಸಾಧಾರಣ ಜೀವಿತವಾಗುವುದಿಲ್ಲ. ಇಬ್ಬರೂ ಸೇರಿದರೇ ಅದು ಪೂರ್ಣ, ಮತ್ತು ಒಟ್ಟಿಗೆ ಮಾನವಕಲ್ಯಾಣಕ್ಕಾಗಿ ಜೀವಿಸಬಹುದು. ಹೆಂಗಸಿಗೆ ಗಂಡಸಿಗಿರುವ ಬುದ್ಧಿಶಕ್ತಿಗಳಿವೆ. ಗಂಡಸು ಮಾಡುವ ಪ್ರತಿಯೊಂದು ಕಾರ್ಯಗಳಲ್ಲಿಯೂ ಆಕೆಗೆ ಒಂದು ಸ್ಥಾನವಿದೆ. ಕೆಲವುಗಳಲ್ಲಿ ಸಮಾನ ಸ್ಥಾನಗಳಿವೆ. ಆಕೆಯ ಕೆಲಸಗಳಲ್ಲಿ ಆಕೆಗೆ ಸಂಪೂರ್ಣ ಸ್ವಾತಂತ್ರ್ಯವಿದೆ. ಸ್ವಾತಂತ್ರ್ಯದ ಸಮಾಧಿಯಾದರೆ ಅವರಿಬ್ಬರ ಅಂತ್ಯವೆಂದೇ ಭಾವಿಸಬೇಕು. ಈ ಮಾತುಗಳ ಅರ್ಥವನ್ನು ಪ್ರತಿಯೊಬ್ಬರೂ ಗ್ರಹಿಸಬೇಕು.

ಕೆಲವರು ಹೇಳಬಹುದು ಮನುಧರ್ಮಶಾಸ್ತ್ರದ ಮೇರೆಗೆ ಸ್ತ್ರೀಯರಿಗೆ ಸ್ವಾತಂತ್ರ್ಯವೇ ಇಲ್ಲವೆಂದು. ಆದರೆ ಅದಕ್ಕೆ ಉತ್ತರವಿಷ್ಟೆ. ಮನುವು ಅದನ್ನು ಬರೆದಾಗ ಹೆಂಗಸನ್ನು ಅತ್ಯಂತ ಕಟುವಾದ ಶೃಂಖಲೆಗಳಿಂದ ಬಂಧಿಸಿ ಅವರಿಗೆ ಯಾವ ಸ್ವಾತಂತ್ರ್ಯವೂ ಸಲ್ಲದಹಾಗೆ ಮಾಡಿದ್ದರು. ಗಾಂಧೀಜಿಯವರ ಮಾತಿನಲ್ಲೇ ಹೇಳಬಹುದಾದರೆ ಆ ಬಗೆಯ ಮನುಷ್ಯರಿಗೆ ಸ್ವಾತಂತ್ರ್ಯಪ್ರೇಮಿನಳಾದ ಗಂಡಸರಿಂದ ಯಾವ ಗೌರವವೂ ಇಲ್ಲವೆಂದು.

ಸ್ತ್ರೀ ಸ್ವಾತಂತ್ರ್ಯದ ಸಂಗ್ರಾಮದಲ್ಲಿ ಗಾಂಧೀಜಿಯವರಿಗೆ ವಿಧವೆಯರ ಬಗ್ಗೆ ಅದರಲ್ಲೂ ಬಾಲವಿಧವೆಯರ ಬಗ್ಗೆ ಅತ್ಯಂತ ಆದರವಿತ್ತು. ಅವರ ಜೀವಿತದಲ್ಲಿ ಬಾಲವಿಧವೆಯರ ಉನ್ನತಿಗಾಗಿ ಅವರು ತಮ್ಮ ರಕ್ತವನ್ನೇ ಸುರಿಸಿದ್ದಾರೆ, ವಿಧವಾವಿವಾಹದ ಬಗ್ಗೆ ಅವರ ಚಳುವಳಿಯು ಅತ್ಯಂತ ರಭಸವಾಗಿ ಸಾಗಿತ್ತು. ಅವರು ವಿಧವೆಯರ ತಾಯಿತಂದೆಗಳಿಗೆ ಇತ್ತ ಬುದ್ಧಿವಾದದಲ್ಲಿ ಅವರನ್ನು ಮತ್ತೆ ಸುಮಂಗಲೆಯರೆಂದು ತಿಳಿದು ವಿವಾಹಮಾಡುವಂತೆ ಪ್ರೇರೇಪಿಸಿದರು. ಮದುವೆಯಾಗಲಿರುವ ಯುವಕರನ್ನುದ್ದೇಶಿಸಿ ವಿಧವೆಯರನ್ನೇ ವಿವಾಹವಾಗುವರೆಂದು ಪಣತೊಡಿರೆಂದು ಬುದ್ಧಿವಾದವಿತ್ತರು.

ಪರ್ದಾ ವಿಚಾರದಲ್ಲಿಯೂ ಗಾಂಧೀಜಿಯು ಅತ್ಯಂತ ಕಠಿನವಾದ ಮಾತುಗಳಲ್ಲಿ ಟೀಕಿಸಿದ್ದಾರೆ. ಅತ್ಯಂತ ಪ್ರಸಿದ್ಧವಾದ ಉಪ್ಪು ಸತ್ಯಾಗ್ರಹದಲ್ಲಿ ಅತಿಕೋಮಲರಾದ, ಸುಖಸಂಪತ್ತಿನಲ್ಲಿ ಬೆಳೆದ ಮಹಿಳೆಯರು ಪರದೆಗಳನ್ನು ಹರಿದು ಮುಂದೆ ಬಂದಾಗ, ಗಾಂಧೀಜಿಯವರ ಮನಸ್ಸು ಅತ್ಯಂತ ಆಹ್ಲಾದ

ಪೂರಿತವಾಯಿತು. ಅಂದಿನಿಂದೀಚೆಗೆ ಪ್ರತಿಯೊಂದು ಸ್ವಾತಂತ್ರ್ಯ ಸಂಗ್ರಾಮದಲ್ಲಿಯೂ ಮಹಿಳೆಯರ ಪಾತ್ರವನ್ನು ಸುವರ್ಣಾಕ್ಷರಗಳಲ್ಲಿ ಬರೆಯಬೇಕೆಂದು ಗಾಂಧೀಜಿಯವರು ಪದೇ ಪದೇ ಹೇಳಿದ್ದಾರೆ. ಸತ್ಯಾಗ್ರಹದಲ್ಲಿ ಅಮಿತ ವೀರ ಪುರುಷರುಗಳ ಜೊತೆಗೆ ಹೋರಾಡಿದ ಮಹಿಳೆಯರನ್ನು ಅಬಲೆಯರೆಂದು ಕರೆಯುವುದು ಮಾನವಕುಲಕ್ಕೆ ಒಂದು ಕಳಂಕವೆಂದು ಬಾಪೂಜಿ ಹೇಳಿದ್ದಾರೆ. ಅವರಿಗೆ ಗಂಡಸರಿಗಿಂತ ಮಿಗಿಲಾದ ಸಹಿಷ್ಣುತೆ ಮತ್ತು ಆಧ್ಯಾತ್ಮಿಕ ಸ್ಫೂರ್ತಿಯಿದೆ. ಅಂತಹ ಮಹಿಳೆಯರಿಲ್ಲದಿದ್ದರೆ, ಮನುಷ್ಯನಿದ್ದೂ ಪ್ರಯೋಜನವಿಲ್ಲ. ಮುಂದಿನ ಪ್ರಪಂಚವು ಅಹಿಂಸೆಯಿಂದ ಕೂಡಿದ್ದಾದರೆ ಆ ಪ್ರಪಂಚವು ಮಹಿಳೆಯರನ್ನೇ ಅವಲಂಬಿಸಿದೆ.

ನಮ್ಮ ದೇಶದ ಅನೇಕ ಸತ್ಯಾಗ್ರಹ ಸಮರಗಳು ನಮ್ಮ ಸ್ತ್ರೀಯರಮೇಲೆ ಅಪರಿಮಿತವಾದ ಪರಿಣಾಮವನ್ನುಂಟುಮಾಡಿವೆ. ಅವು ನಮ್ಮ ಸಮಾಜವನ್ನೇ ಮಾರ್ಪಾಟುಮಾಡಿವೆ. ಸಮಾಜ ಸುಧಾರಕರು ಅನೇಕ ಶತಮಾನಗಳಿಂದ ಯಾವುದನ್ನು ಸಾಧಿಸಬೇಕೆಂದಿದ್ದರೋ ಅದನ್ನು ಗಾಂಧೀಜಿಯವರು ಒಂದು ಕ್ಷಣದಲ್ಲಿ ಮಾಡಿದರು. ಸತ್ಯಾಗ್ರಹ ಸಮರಗಳಿಂದ ಸ್ತ್ರೀಯ ಆಜನ್ಮ ಹಕ್ಕುಗಳೂ, ಸ್ವಾತಂತ್ರ್ಯವೂ ಎಲ್ಲರಿಗೂ ದಿಟ್ಟತನದಿಂದ ಎದ್ದು ತೋರುತ್ತದೆ.

ಗಾಂಧೀಜಿಯವರ ಸ್ವಂತ ಜೀವನದಲ್ಲಿಯೇ ಸ್ತ್ರೀಯರ ಮಹತ್ವವು ಮೂಡಿದೆ. ತಮ್ಮ ಧರ್ಮಪತ್ನಿ ಕಸ್ತೂರಿಬಾಯಿ ಗಾಂಧಿಯವರು ತಮ್ಮ ಪತಿಗಾಗಿ ಎಷ್ಟು ಶ್ರಮಿಸಿ ಸಹಾಯಕರಾಗಿದ್ದರೋ ಅಷ್ಟು ಸ್ವತಂತ್ರರಾಗಿದ್ದರು. ಅವರ ಆಶ್ರಮದ ಜೀವಿತದಲ್ಲಿ ಸ್ತ್ರೀಯರ ಪಾತ್ರವು ಅತ್ಯಂತ ಕಲಾಪೂರಿತವಾಗಿ, ಅವರು ಹೇಳುವ ಪ್ರತಿಯೊಂದು ವಾಕ್ಯವನ್ನೂ ಪ್ರತಿಬಿಂಬಿಸುವಂತಿತ್ತು.

ಆ ಪೂಜ್ಯ ಪಿತಾಮಹನು, ಕರ್ಮಯೋಗಿಯು ಯಾವ ಮಾರ್ಗವನ್ನು ನಮಗೆಲ್ಲಾ ತೋರಿಸಿದನೋ, ಆ ಮಾರ್ಗವನ್ನು ಅವಲಂಬಿಸಿ ಕೃತಾರ್ಥರಾಗೋಣ.

---

# ಮಹಿಳೆಯರು ಮತ್ತು ಅಸ್ಪೃಶ್ಯತೆ

ಶ್ರೀಮತಿ ಟಿ. ಸುನಂದಮ್ಮ

ಭಾರತದಲ್ಲಿ ಜರುಗುತ್ತಿರುವ ಗಾಂಧಿ ಜಯಂತಿಯ ಅಂಗವಾಗಿ ಒಂದು ಪ್ರಚಾರ ಭಾಷಣಮಾಲೆಯನ್ನು ನಮ್ಮ ಆಕಾಶವಾಣಿಯು ಕೈಗೊಂಡಿರುವುದು ವಂದನಾರ್ಹವಾಗಿದೆ.

ಎಂದಿನಂತೆ ಈ ಸುಸಮಯದಲ್ಲಿ ಬಾಪೂಜೀಯವರ ಆಶೀರ್ವಾದ ಮತ್ತು ಸಂದೇಶಗಳನ್ನು ನಾವು ಪಡೆಯಲು ಇಲ್ಲದಾಗಿ ಕಂಗೆಟ್ಟಿದ್ದೇವೆ. ಬಾಪೂಜೀಯವರು ನಮ್ಮಿಂದ ಅಗಲಿ, ಅವರಿಗೆ ಸ್ಮಾರಕವನ್ನೇರ್ಪಡಿಸುವ ಕೆಲಸದಲ್ಲಿ ನಾವು ನಿರತರಾಗಬೇಕಾಗಿದೆ. ಆದರೆ ಅವರ ಪ್ರತಿಮೆಗಳನ್ನು ಪ್ರತಿಷ್ಠಿಸುವುದರಿಂದಾಗಲೀ, ಇಲ್ಲವೇ ಅವರ ಹೆಸರಿನಲ್ಲಿ ಸ್ತಂಭಗಳನ್ನು ಕಟ್ಟುವುದರಿಂದಾಗಲೀ ಅವರ ಆತ್ಮಕ್ಕೆ ಶಾಂತಿಯನ್ನು ಕೊಟ್ಟಂತಾಗುವುದಿಲ್ಲ. ಅವರ ಧ್ಯೇಯಗಳನ್ನು ಪ್ರಚಾರಪಡಿಸಿ ಅವು ಪ್ರಪಂಚದ ಮೂಲೆ ಮೂಲೆಗಳಲ್ಲಿ ಹರಡಿ ವಿಶ್ವಶಾಂತಿಯನ್ನುಂಟುಮಾಡುವುದರಿಂದಲೇ ಅವರ ಆತ್ಮಕ್ಕೆ ತೃಪ್ತಿಯಾಗುವುದು. ಅದೇ ಅವರಿಗೆ ನಾವು ಸಲ್ಲಿಸುವ ಹಂಬಲಕಾಣಿಕೆ.

ಈಗಾಗಲೇ ಈ ಪ್ರಚಾರ ಭಾಷಣಮಾಲೆಯಲ್ಲಿ ಅನೇಕ ಮಾನ್ಯಮಹನೀಯರು ಮತ್ತು ಮಹಿಳೆಯರಿಂದ ಗಾಂಧೀಜೀಯವರ ತತ್ತ್ವ ಮತ್ತು ರಚನಾತ್ಮಕ ಕಾರ್ಯಗಳ ವಿಚಾರದಲ್ಲಿ ಭಾಷಣಗಳನ್ನು ಕೇಳಿರುವಿರಿ.

ಈಗ ಸ್ತ್ರೀಯರು ಮತ್ತು ಅಸ್ಪೃಶ್ಯತೆ ಎಂಬ ವಿಷಯದ ಮೇಲೆ ನಾಲ್ಕಾರು ಮಾತುಗಳನ್ನಾಡಲು ಆಶಿಸುತ್ತೇನೆ. ಬಾಪೂಜೀಯವರಿಗೆ ಅತಿ ಪ್ರಿಯವಾದ ಮತ್ತು ಅತಿ ಮುಖ್ಯವಾದ ರಚನಾತ್ಮಕ ಕಾರ್ಯವೆಂದರೆ ಅದು ಹರಿಜನೋದ್ಧಾರ. ಛಿದ್ರಛಿದ್ರವಾಗಿ ಒಡೆದುಹೋಗಿದ್ದ ಜನಾಂಗವನ್ನು ಸಂಘಟಿಸಿ ಅವರುಗಳನ್ನೊಂದುಗೂಡಿಸಿ ಒಂದು ಜನಾಂಗವನ್ನಾಗಿ ಮಾಡಬೇಕೆಂದು ಅವರು ತಮ್ಮ ಜೀವವನ್ನೇ ಅದಕ್ಕೆ ಮೀಸಲಾಗಿಟ್ಟಿದ್ದರು. ಹಿಂದೂ ಧರ್ಮವೂ ಸಹ ಶಾಸ್ತ್ರಗಳ ಆಧಾರವಿಲ್ಲದ ಆಚಾರ ವ್ಯವಹಾರಗಳಿಂದ ತನ್ನ ಪ್ರಭಾವವನ್ನು ಕಳೆದುಕೊಂಡಿತ್ತು. ಆದರೆ ಬಾಪೂಜೀಯವರು ತಮ್ಮ ಕಾರ್ಯಕ್ರಮವನ್ನು

ಸತ್ಯ, ಧರ್ಮ, ಅಹಿಂಸೆಗಳ ಅಡಿಗಲ್ಲಿನ ಮೇಲೆ ಪ್ರಯೋಗಮಾಡಿ ಹಿಂದೂ ಧರ್ಮವನ್ನು ಪುನರುದ್ಧಾರಮಾಡಿದರು.

ಪೂಜ್ಯ ಗಾಂಧೀಜಿಯವರಿಗೆ ತಮ್ಮ ಕಾರ್ಯಕ್ರಮವು ಹರಡಬೇಕಾದರೆ ಬಹುವಾಗಿ ಸ್ತ್ರೀಯರಿಂದಲೇ ಸಾಧ್ಯವೆಂದು ನಂಬಿದ್ದರು. ಅವರು ಹರಿಜನೋದ್ಧಾರಕ್ಕಾಗಿ ಪ್ರವಾಸಮಾಡಿದಾಗ ಜಲಾಸಪುರದಲ್ಲಿ ನಡೆದ ಬಹಿರಂಗ ಸಭೆಯಲ್ಲಿ ಹೀಗೆಂದು ನುಡಿದಿದ್ದರು: "ಸ್ತ್ರೀಯರು ಸೇವೆಯ ಮತ್ತು ತ್ಯಾಗದ ಅಧಿದೇವತೆಗಳೆಂದು ನಾನು ಅವರನ್ನು ಪೂಜಿಸುತ್ತೇನೆ. ಸ್ತ್ರೀಗೆ ಸ್ವೈಜವಾಗಿ ಬಂದಿರುವ ಈ ಸೇವಾಕ್ಷೇತ್ರದಲ್ಲಿ ಪುರುಷನು ಅವಳ ಸರಿಸಮಾನನಾಗಲಾರನು. ಕಷ್ಟವನ್ನು ನೋಡಿ ಮರುಗುವ ಹೃದಯವು ಹೆಂಗಸಿನದು. ಹರಿಜನರ ಕಷ್ಟವು ನಿಮಗೆ ತಗುಲಿ ಅಸ್ಪೃಶ್ಯತೆಯನ್ನು ಹೋಗಲಾಡಿಸಿದರೆ ಅದರೊಡನೆ ಉಚ್ಚರು ನೀಚರು ಎಂಬ ವ್ಯತ್ಯಾಸವು ಹೋಗುವುದು. ಹಿಂದೂ ಧರ್ಮವೂ ಪರಿಶುದ್ಧವಾಗುವುದು. ಹಿಂದೂ ಸಮಾಜದ ಉನ್ನತಿಯನ್ನು ಸಾಧಿಸಿದಂತಾಗುವುದು. ಮೂವತ್ತೈದು ಕೋಟಿ ಜನಸಂಖ್ಯೆಯುಳ್ಳ ಇಡೀ ಭಾರತದ ಮೇಲ್ಮೆಗೆ ಕಾರಣರಾಗುವಿರಿ. ಮಾನವಕೋಟಿಯ ಮೇಲೆ ಒಳ್ಳೆಯ ಪರಿಣಾಮಕಾರಿಯಾಗುವ ಆಶ್ಚರ್ಯಕರವಾದ ಸುಧಾರಣೆ ಇದು. ಆತ್ಮಪರಿಶುದ್ಧತೆಗೆ ಕೈಗೊಂಡಿರುವ ದೊಡ್ಡ ಚಳುವಳಿಯಿದು."

ಅವರು ತಮ್ಮ ಪ್ರವಾಸದ ಕೊನೆಯ ಭಾಷಣವನ್ನು ಕಾಶಿಯಲ್ಲಿ ನಡೆಸಿ ಸ್ತ್ರೀಯರನ್ನುದ್ದೇಶಿಸಿ ಈ ರೀತಿ ಹೇಳಿರುವರು: "ದೇವರು ಯಾರನ್ನೂ ಕೀಳೆಂದಾಗಲೀ ಮೇಲೆಂದಾಗಲೀ ನಿರ್ಮಾಣಮಾಡಲಿಲ್ಲ. ಕೇವಲ ಅವನ ಹುಟ್ಟಿನಿಂದಲೇ ಕೀಳುಮೇಲೆಂದು ಸಾರುವ ಶಾಸ್ತ್ರಕ್ಕೆ ಬೆಂಬಲ ಕೊಡಲು ಅಸಾಧ್ಯ. ಹಾಗೆ ಹೇಳುವುದು ಸತ್ಯ ಮತ್ತು ಈಶ್ವರನನ್ನೇ ಇಲ್ಲವೆಂದು ಸಾರಿದಂತಾಗುವುದು."

ಮದ್ರಾಸಿನಲ್ಲಿ ಅವರು ಮತ್ತೊಂದು ಸ್ತ್ರೀಯರ ಸಭೆಯಲ್ಲಿ ಹೀಗೆಂದು ನುಡಿದಿರುವರು: "ಹರಿಜನೋದ್ಧಾರಕಾರ್ಯವು ಬೆಂಕಿಯಂತಿದೆ. ನೀವು ತುಪ್ಪ ಹಾಕಿದಷ್ಟು ಜಾಜ್ವಲ್ಯಮಾನವಾಗಿ ಉರಿಯುವುದೂ ಅಲ್ಲದೆ ಹೆಚ್ಚು ಹೆಚ್ಚು ತುಪ್ಪವನ್ನಾಶಿಸುವುದು.'

ಅಸ್ಪೃಶ್ಯತೆಗೆ ಯಾವ ಶಾಸ್ತ್ರದ ಯಾವ ಆಧಾರವೂ ಇಲ್ಲವೆಂಬುದೇ ಬಾಪೂಜಿಯವರ ವಾದ. ಸಮಾಜದ ಕೆಲಸಕಾರ್ಯಗಳು ಸಾಂಗವಾಗಿ ನಡೆಯಬೇಕೆಂದು ವರ್ಣಾಶ್ರಮಧರ್ಮಗಳು ಹುಟ್ಟಿರುವವೇ ಹೊರತು ಜನತೆಯಲ್ಲಿ ಕೀಳುಮೇಲೆಂಬ ಭಾವನೆಯನ್ನು ಹುಟ್ಟಿಸುವುದಕ್ಕಲ್ಲ. ಈ ರೀತಿ

ಭೇದವನ್ನು ಕಲ್ಪಿಸುವುದು ಅಧರ್ಮ ಮತ್ತು ಪಾಪಕರ. ಬಾಪೂಜಿಯವರಿಗೆ ಸ್ತ್ರೀಯರಿಂದ ಹರಿಜನೋದ್ಧಾರಕಾರ್ಯವು ಸಾಧ್ಯವೆಂದು ನಂಬಿಕೆ ಬರಲು ಅನೇಕ ಕಾರಣಗಳಿವೆ. ಏಕೆಂದರೆ ಸ್ವಾಭಾವಿಕವಾಗಿ ಅವಳಿಗೆ ಮೃದುಕರಳು. ಕಷ್ಟವನ್ನು ನೋಡಿ ಯಾವಾಗಲೂ ಮರುಗುವಳು. ಹರಿಜನರಿಗೆ ಈಗಿರುವ ತೊಂದರೆಯು ಸ್ತ್ರೀಯರಿಗೆ ಬಹು ಶೀಘ್ರವಾಗಿ ತಾಗುವುದು. ಸಮಾಜದಲ್ಲಿ ಸ್ತ್ರೀಗೆ ದೊರಕಬೇಕಾದ ಸ್ಥಾನಮಾನಗಳು ದೊರಕದೆ, ಪುರುಷನ ಕಾಮದ ದೌರ್ಜನ್ಯಕ್ಕೊ ಇಲ್ಲವೇ ಸಮಾಜದ ಆಧಾರವಿಲ್ಲದ ಮತ್ತು ಹೊಸಹೊಸದಾಗಿ ಗುಪ್ತವಾಗಿ ಸೇರಿಸಿದ ಸ್ಮೃತಿ ಮತ್ತು ಇತರ ಶಾಸ್ತ್ರಗಳ ಮೇಲೆ ಪುರುಷನು ತನ್ನ ಅನುಕೂಲಕ್ಕಾಗಿ ಸೇರಿಸಿರುವ ಶಾಸ್ತ್ರಗಳ ಆಧಾರದ ಮೇಲೆ ನೊಂದ ಸ್ತ್ರೀಯು, ಇವೇ ಕಾರಣಗಳಿಂದ ಸಂಕಟಕ್ಕೊಳಗಾದ ಹರಿಜನರಿಗೋಸ್ಕರ ವಾಗಿ ಮರುಕಪಡುವುದು ಸ್ವಾಭಾವಿಕವಲ್ಲವೆ?

ಗಾಂಧೀಜೀಯವರ ದೃಷ್ಟಿಯಲ್ಲಿ ಸ್ತ್ರೀ ತಾಯಿ. ತಾಯಿಗೆ ಮಕ್ಕಳ ದುಃಖವು ತಿಳಿಯುವುದು ಬಹುಬೇಗ.

ಹರಿಜನರನ್ನು ಸಮಾಜವು ದೂರಕ್ಕೆ ತಳ್ಳಿರುವುದು ಅವರು ಮಾಡುವ ಪಾಕೀಜಿನ ಕೆಲಸದಿಂದ ಅವರು ಅಸಹ್ಯಪಟ್ಟುಕೊಳ್ಳದೆ ಸಮಾಜದ ಆರೋಗ್ಯ ವನ್ನು ಕಾಪಾಡುವುದಕ್ಕಾಗಿ ಕಸ, ಪ್ರಾಣಿಗಳ ಮತ್ತು ಮನುಷ್ಯರ ಗೊಬ್ಬರ ವನ್ನು ತಮ್ಮ ಕೈಯಿಂದ ಎತ್ತಿಹಾಕುವರು. ಒಂದು ದೃಷ್ಟಿಯಲ್ಲಿ ನೋಡಿದರೆ ಸ್ತ್ರೀಯೂ ಸಹ ಈ ಕೆಲಸವನ್ನು ಸಾಧಾರಣವಾಗಿ ಪ್ರತಿದಿನವೂ ಮಾಡು ತ್ತಿರುವಳು. ಆದರೆ ಇದರಿಂದ ಸವರ್ಣ ಸ್ತ್ರೀಯರಿಗೆ ಯಾವ ಅಸ್ಪೃಶ್ಯತೆಯೂ ಇಲ್ಲ. ತಾನು ಸ್ನಾನಮಾಡಿ ಇಲ್ಲವೇ ಇತರ ವಿಧದಿಂದ ಈ ಕೊಳಕುಗಳಿಂದ ಪಾರಾಗುವಳು. ಆದರೆ ಹರಿಜನರಿಗೆ ಯಾವಾಗಲೂ ಇದರಿಂದ ಪಾರಾಗಲು ಏಕೆ ಸಾಧ್ಯವಿಲ್ಲವೋ ನಮಗೆ ತಿಳಿಯುವುದಿಲ್ಲ.

ಪೂಜ್ಯ ಬಾಪೂಜೀಯವರು ಡೆಲ್ಲಿಯಲ್ಲಿ ಒಂದುಬಾರಿ ಹೀಗೆ ನುಡಿದಿರುವರು: "ಹರಿಜನರು ಗ್ರಾಮನಿರ್ಮಲೀಕರಣಮಾಡುವುದರಿಂದ ಅಸ್ಪೃಶ್ಯರಾಗುವು ದಾದರೆ ಅದೇ ಕೆಲಸವನ್ನು ಯಾವ ತಾಯಿಯು ತನ್ನ ಮಕ್ಕಳಿಗೆ ಮಾಡದೇ ಇರುವಳು? ಸಮಾಜದ ಬಹು ಮುಖ್ಯ ಕೆಲಸಮಾಡುತ್ತಿರುವ ಹರಿಜನರನ್ನು ಅಸ್ಪೃಶ್ಯರೆಂದು ಗಣಿಸುವುದು ಅಧರ್ಮದ ಪರಿಮಿತಿಯ ಕೊನೆ; ದೇವರ ದೃಷ್ಟಿಯಲ್ಲಿ ಎಲ್ಲರೂ ಸರಿಸಮಾನರು. ದೇವರು ಮನುಷ್ಯರಲ್ಲಿ ಮೇಲುಕೀಳೆಂದು ಸೃಷ್ಟಿಮಾಡಿದ್ದರೆ ನಮ್ಮಗಳಿಗೆ ಗೋಚರವಾಗುವ ಹಾಗೆ ವ್ಯತ್ಯಾಸಗಳಿರು ತ್ತಿದ್ದುವು. ಉದಾಹರಣೆಗಾಗಿ ಆನೆಗೂ ಮತ್ತು ಇರುವೆಗೂ ವ್ಯತ್ಯಾಸವನು

ಹೇಳಬಹುದು. ಆದರೆ ಮನುಷ್ಯರಿಗೆಲ್ಲಾ ಒಂದೇ ರೂಪವನ್ನೂ ಮತ್ತು ಒಂದೇ ತರಹ ಸ್ವಾಭಾವಿಕ ಅವಶ್ಯಕತೆಗಳನ್ನೂ ಕೊಟ್ಟಿರುವನು."

ಹರಿಜನರ ಸಮಸ್ಯೆಯನ್ನು ಬಿಡಿಸಲು ಬೇಕಾದ ಕರುಣೆ ಮತ್ತು ವಿಶಾಲ ಹೃದಯದ ಜೊತೆಗೆ ಅದನ್ನು ಸಾಧಿಸಲು ಬೇಕಾದ ಶಕ್ತಿಯನ್ನೂ ಸ್ತ್ರೀ ಪಡೆದಿರುವಳು. ಧರ್ಮಸ್ಥಾಪನೆ ಮಾಡುವದರಲ್ಲಿ ಸ್ತ್ರೀಯು ಪುರುಷನಿಗಿಂತ ಹೆಚ್ಚಿನ ಯೋಗ್ಯತೆ ಪಡೆದಿರುವಳು. ಸ್ವಾರ್ಥತ್ಯಾಗದಲ್ಲಿ ಸ್ತ್ರೀಯು ಪುರುಷನಿಗಿಂತಲೂ ಗಟ್ಟಿಗಳೆಂದು ಪೂಜ್ಯ ಬಾಪೂಜೀಯವರು ಅಭಿಪ್ರಾಯಪಟ್ಟಿರುವರು. ಗಾಂಧೀಜೀಯವರು ಅನೇಕವೇಳೆ ಸ್ತ್ರೀಯರು ಪುರಾಣಪ್ರಸಿದ್ಧರಾದ ಸೀತಾ, ಸಾವಿತ್ರಿಯಂತಿರಬೇಕೆಂದು ಆಶಿಸಿದ್ದಾರೆ. ಈ ವ್ಯಕ್ತಿಗಳು ಧರ್ಮವನ್ನೆತ್ತಿ ಹಿಡಿಯುವದಕ್ಕೆ ತಮ್ಮ ಸರ್ವಶಕ್ತಿಗಳನ್ನೂ ಉಪಯೋಗಿಸಿದರು. ಸಾವಿತ್ರಿಯು ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಲು, ನ್ಯಾಯವನ್ನು ಪಾಲಿಸಿ ಶಿಕ್ಷಿಸುವ ಯಮಧರ್ಮರಾಯನನ್ನೇ ಅಹಿಂಸೆಯಿಂದ ಎದುರಿಸಿ ಯಮಧರ್ಮರಾಯನನ್ನು ಸೋಲಿಸಿ ಸತ್ಯಾಗ್ರಹದಲ್ಲಿ ಮೊದಲನೇ ಸ್ಥಾನವನ್ನು ಗಳಿಸಿದ ವೀರ ರಮಣಿ. ಸೀತೆಯು ಪುರುಷನಲ್ಲಿರುವ ಮೃಗಸ್ವಭಾವದ ಕಾಮವನ್ನು ರಾವಣನಲ್ಲೆದುರಿಸಿ, ಧರ್ಮಸ್ವರೂಪನಾದ ರಾಮನ ಸಹಧರ್ಮಿಣಿ. ಇಂತಹ ಆದರ್ಶ ಸ್ತ್ರೀಯರ ಗುಂಪಿಗೆ ಸೇರಿದ ನಾವುಗಳು ಈಗಿನ ಸಮಾಜದಲ್ಲಿ ನಮ್ಮ ಹರಿಜನ ಸಹೋದರ ಸಹೋದರಿಯರಿಗೆ ನಡೆಯುತ್ತಿರುವ ಅಧರ್ಮವನ್ನೂ ಮತ್ತು ಅನ್ಯಾಯವನ್ನೂ ನೋಡುತ್ತಾ ಕುಳಿತಿರುವುದು ಸಾಧ್ಯವಿಲ್ಲ. ಬಾಪೂಜೀಯವರ ಬಲಿದಾನ ಮತ್ತು ಆಶೀರ್ವಾದದಿಂದ ಭಾರತದಲ್ಲಿ ಸ್ವತಂತ್ರವು ಒಂದು ಒಂದು ಹೊಸಯುಗವು ಪ್ರಾರಂಭವಾಗಿದೆ. ಭಾರತೀಯರೆಲ್ಲರಿಗೂ ಸರಿಸಮಾನ ಹಕ್ಕು ಮತ್ತು ಅವಕಾಶವಿರುವ ಹಾಗೆ ರಾಜ್ಯಾಂಗ ರಚನೆಯಾಗುತ್ತಿದೆ. ಈ ರಾಜ್ಯಾಂಗ ಜಾರಿಗೆ ಬಂದಮೇಲೆ ಕಾನೂನಿನ ದೃಷ್ಟಿಯಿಂದ ಅಸ್ಪೃಶ್ಯತೆಯು ಹೋಗುವುದು. ಆದರೆ ಸಮಾಜವು ಅಸ್ಪೃಶ್ಯತೆಯನ್ನು ಸಾಮಾಜಿಕ ಕ್ಷೇತ್ರದಿಂದಲೂ ಕೂಡ ದೂರಮಾಡದೇ ಹೋದರೆ ಈ ನಿವಾರಣೆಯು ಬರೀ ಬರವಣಿಗೆಯಲ್ಲಿ ನಿಲ್ಲುವುದು.

ಸ್ತ್ರೀಯರು ಸಂಪ್ರದಾಯಗಳನ್ನೂ ಮತ್ತು ಹಿಂದೂಧರ್ಮದ ಪವಿತ್ರತೆಯನ್ನೂ ಕಾಪಾಡಿಕೊಂಡು ಬರುತ್ತಿದಾರೆ. ಆದರೆ ಈ ಸಂಪ್ರದಾಯಗಳಲ್ಲಿ ಯಾವುದು ಧರ್ಮದ ಅಡಿಗಲ್ಲಿನಮೇಲಿದೆ, ಯಾವುದು ಸಮಾಜದ ಏಳಿಗೆಗೆ ಅವಶ್ಯಕವೆಂದು ಯೋಚನೆಮಾಡಿ, ಒಳ್ಳೆಯ ಸಂಪ್ರದಾಯಗಳನ್ನು ಅನುಷ್ಠಾನಕ್ಕೆ ತಂದು ಅಧರ್ಮವಾದುದನ್ನು ಎದುರಿಸುವುದು ಸ್ತ್ರೀಯ ಆದ್ಯಕರ್ತವ್ಯ.

ಆದರೆ ಈ ಹರಿಜನೋದ್ಧಾರಕಾರ್ಯದಲ್ಲಿ ಸ್ತ್ರೀಯರು ಪುರುಷರಷ್ಟು ಆಸಕ್ತಿಯನ್ನು ತೋರಿಸದಿರುವದು ವಿಷಾದಕರ ಸಂಗತಿಯೇ ಸರಿ. ಇನ್ನು ಮೇಲಾದರೂ ಸ್ತ್ರೀಯರು ಈ ಕ್ಷೇತ್ರದಲ್ಲಿ ಹೆಚ್ಚಿಗೆ ಮಾಡಲೆಂದು ಬಯಸಿ ಪೂಜ್ಯ ಬಾಪೂಜೀಯವರು ತಮ್ಮ ಕಾಶಿ ಹರಿಜನಪ್ರವಾಸದಲ್ಲಿ ಸ್ತ್ರೀಯರಿಗೆ ಈ ಕೆಳಗೆ ಹೇಳಿರುವಂತೆ ತಿಳಿಸಿರುವರು : " ಈ ಪಾಪವನ್ನು ಕಳೆದುಕೊಳ್ಳುವದಕ್ಕೆ ನೀವು ಅವರ ಕೇರಿಗಳಿಗೆ ಹೋಗಿ ಅವರ ಮಕ್ಕಳನ್ನು ನಿಮ್ಮ ಮಕ್ಕಳಂತೆ ಪ್ರೀತಿಸಿ, ಅವರ ಏಳಿಗೆಯಲ್ಲಿ ಆಸಕ್ತಿಯನ್ನು ತೋರಿಸಿ ಅವರಿಗೆ ಹೊಟ್ಟೆತುಂಬ ಹಿಟ್ಟಿದೆಯೇ? ಕುಡಿಯುವದಕ್ಕೆ ಸಾಕಷ್ಟು ಶುದ್ಧವಾದ ನೀರಿದೆಯೇ? ಅವರ ಮನೆಗಳಲ್ಲಿ ಸಾಕಷ್ಟು ಬೆಳಕು, ಗಾಳಿ ಬರುವದೇ " ಎಂದು ತಿಳಿದುಕೊಂಡು ಪರಿಹಾರ ಮಾಡುವದು.

ಇನ್ನೊಂದು ರೀತಿಯು ತಾವು ಸೂತು ನೂರಾರು ಹರಿಜನರಿಗೆ ಸಹಾಯಕವಾಗಿರುವ ಖಾಧಿಯನ್ನು ಧರಿಸುವೆನು ಎಂದು ಪ್ರಮಾಣಮಾಡುವದು. ನೀವು ನೂಲುವದಾದರೆ ಅವರೊಡನೆ ಐಕ್ಯವಾದಂತಾಗುವದು. ತಾವು ಉಡುವ ಪ್ರತಿಯೊಂದು ಗಜ ಖಾಧಿಯ ಹಣವೂ ಹರಿಜನರ ಕಿಸೆಯನ್ನು ಸೇರುವದು. ಕೊನೆಯದಾಗಿ ಹರಿಜನರ ಉದ್ಧಾರಕ್ಕಾಗಿಯೇ ಏರ್ಪಟ್ಟಿರುವ ಹರಿಜನ ನಿಧಿಗೆ ತಮ್ಮ ಕಾಣಿಕೆಯನ್ನು ಅರ್ಪಿಸುವದು.

ಈ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತಂದು ಪಿತಾಮಹನಿಗೆ ತಮ್ಮ ಸೇವಾಕಾಣಿಕೆಯನ್ನು ಸಲ್ಲಿಸುವಿರೆಂದು ಈ ಸಂದರ್ಭದಲ್ಲಿ ಬೇಡುತ್ತೇನೆ.



# ವಿದ್ಯಾರ್ಥಿನಿಯರಿಗೆ ಹಿತವಚನ

ಶ್ರೀಮತಿ ನರಸಮ್ಮ

ಮಹಾತ್ಮರು ಇಂದು ನಮ್ಮನ್ನು ಅಗಲಿಹೋಗಿದ್ದಾರೆ. ಅವರ ಜೀವ ಜ್ಯೋತಿ ನಂದಿಹೋಗಿದ್ದರೂ ಅವರು ತೋರಿಸಿದ ಆದರ್ಶಗಳ ಬೆಳಕು ಮಾಯವಾಗಿಲ್ಲ. ಅವರು ಹೇಳಿಕೊಟ್ಟ ಆದರ್ಶಪಾಠಗಳನ್ನು ನಮ್ಮ ವಿದ್ಯಾರ್ಥಿನಿಯರು ತಪ್ಪದೆ ಅನುಸರಿಸಿದರೆ ಮಹಾತ್ಮರಿಗೆ ತೃಪ್ತಿಯಾಗುವುದು ಖಂಡಿತ. ವಿದ್ಯಾರ್ಥಿನಿಯರ ಸಭೆಯಲ್ಲಿ ಭಾಷಣಮಾಡುವಾಗ ಅವರಿಗೆ ಬುದ್ಧಿವಾದ ಹೇಳುವಾಗ ದೇಶದ ಹಿತರಕ್ಷಣೆಯಲ್ಲಿ ವಿದ್ಯಾರ್ಥಿನಿಯರ ಪಾತ್ರವು ಎಷ್ಟು ಮುಖ್ಯವಾದುದು ಎಂಬ ಅಂಶವನ್ನು ಒತ್ತಿ ಹೇಳಿದ್ದಾರೆ.

ಒಂದು ದೇಶದ ಪ್ರಗತಿಗೆ ಸ್ತ್ರೀಯರೂ ಪುರುಷರೂ ವಿದ್ಯಾವಂತರಾಗ ಬೇಕು. ಅನಕ್ಷರತೆ ದೇಶದಿಂದ ತೊಲಗಬೇಕು. ಜ್ಞಾನಾರ್ಜನೆಯಿಂದ ಬುದ್ಧಿವಿಕಾಸಗೊಳ್ಳುತ್ತದೆ. ಬುದ್ಧಿ ವಿಶಾಲವಾದಂತೆಲ್ಲಾ ಸೇವಾಸಕ್ತಿ ವೃದ್ಧಿ ಗೊಳ್ಳುತ್ತದೆ. ಸ್ತ್ರೀವಿದ್ಯಾಭ್ಯಾಸದ ಯೋಜನೆಯನ್ನು ತಯಾರಿಸುವಾಗ ವಿವಾಹಿತಜೀವನದಲ್ಲಿ ಮಹಿಳೆಯ ಸ್ಥಾನಕ್ಕೆ ತಕ್ಕ ಶಿಕ್ಷಣಕ್ರಮವನ್ನು ಸೇರಿಸ ಬೇಕು. ಪುರುಷನಿಗೆ ಪ್ರಪಂಚದ ವ್ಯವಹಾರಜ್ಞಾನ ಹೆಚ್ಚಾಗಿ ಬೇಕಾಗು ತ್ತದೆ. ಮಹಿಳೆಗೆ ಮನೆಯೇ ರಾಜ್ಯ. ಮನೆಕೆಲಸಗಳಲ್ಲಿ, ರೋಗಿಗಳ ಶುಶ್ರೂಷೆ ಯಲ್ಲಿ, ಮಕ್ಕಳ ಪೋಷಣೆಯಲ್ಲಿ, ಅವರಿಗೆ ಕೊಡುವ ವಿದ್ಯಾಭ್ಯಾಸದಲ್ಲಿ ಮಹಿಳೆಗೆ ಹೆಚ್ಚು ಜ್ಞಾನ ದೊರೆಯಬೇಕು. ವಿದ್ಯಾಭ್ಯಾಸಕ್ರಮದಲ್ಲಿ ಜ್ಞಾನ ಭಂಡಾರವನ್ನು ತುಂಬಿಕೊಳ್ಳುವುದರಲ್ಲಿ ಬಾಲಕ ಬಾಲಿಕೆಯರಿಗೆ ಸಮಾನವಾದ ಅವಕಾಶವನ್ನು ಕಲ್ಪಿಸಿಕೊಡುವುದು ಅಗತ್ಯವಾದರೂ ಮಹಿಳೆಗೆ ವಿಶೇಷ ಶಿಕ್ಷಣದ ಅವಶ್ಯಕತೆ ಹೆಚ್ಚಾಗಿದೆ.

ಈಗಿನ ಕಾಲದಲ್ಲಿ ವಿದ್ಯಾಭ್ಯಾಸವೆಂದರೆ ಇಂಗ್ಲಿಷ್ ವಿದ್ಯಾಭ್ಯಾಸ. ನಮ್ಮ ಜನಸಾಮಾನ್ಯರಲ್ಲಿ ಪುರುಷರಿಗಾಗಲೀ ಸ್ತ್ರೀಯರಿಗಾಗಲೀ ಇಂಗ್ಲಿಷ್ ಭಾಷೆಯ ಪರಿಚಯ ಅನವಶ್ಯಕ. ರಾಜಕೀಯ ಚಟುವಟಿಕೆಗೂ, ಜೀವನೋ ಪಾಯಕ್ಕೂ ಅಂತರರಾಷ್ಟ್ರೀಯ ವ್ಯಾಪಾರೋದ್ಯಮಗಳಿಗೂ ಇಂಗ್ಲಿಷ್

ಬೇಕೆಂಬುದು ನಿಜ. ಆದರೆ ಹೆಂಗಸು ವ್ಯಾಪಾರೋದ್ಯಮವನ್ನು ತನ್ನ ಜೀವನೋಪಾಯವಾಗಿ ಮಾಡಿಕೊಳ್ಳುವುದಿಲ್ಲ. ಅವರಿಗೆ ಬೇಕಾಗುವ ವ್ಯವಹಾರ ಜ್ಞಾನವನ್ನೆಲ್ಲಾ ತಾಯ್ನುಡಿಯ ಮೂಲಕ ತಿಳಿಸಬಹುದು. ಮುಖ್ಯವಾಗಿ ವಿದ್ಯಾರ್ಥಿನಿಯರಿಗೆ ತಾಯ್ನುಡಿಯ ಮೂಲಕವೇ ಶಿಕ್ಷಣ ಕೊಡಬೇಕು. ಇಂಗ್ಲಿಷ್ ವಿದ್ಯಾಭ್ಯಾಸದ ಅವಶ್ಯಕತೆ ಅಥವ ವ್ಯಾಮೋಹವಿರುವ ವಿದ್ಯಾರ್ಥಿನಿಯರು ಗಂಡಸರ ಶಾಲೆಗಳಿಗೆ ಹೋಗಿ ವ್ಯಾಸಂಗಮಾಡಬಹುದು. ಇಂಗ್ಲಿಷ್ ಸಾಹಿತ್ಯ ಅತಿ ವಿಸ್ತಾರವಾದುದು. ಅದರ ಅಮೂಲ್ಯ ಜ್ಞಾನ ಭಂಡಾರವನ್ನು ಮಹಿಳೆಯರಿಗೆ ತೆರೆಯದಿರುವುದು ಅನ್ಯಾಯವೆಂದು ಹೇಳಬಹುದು. ಒಂದುವೇಳೆ ವಿದ್ಯಾರ್ಥಿನಿಯರಿಗೆ ಇಂಗ್ಲಿಷ್ ಸಾಹಿತ್ಯದಲ್ಲಿ ಅಭಿರುಚಿಯಿದ್ದರೆ ಇಂಗ್ಲಿಷ್ ಒಂದೇ ಏಕೆ ಇಡೀ ವಿಶ್ವದ ಸಾಹಿತ್ಯವನ್ನೇ ಬೇಕಾದರೂ ಅಭ್ಯಾಸಮಾಡಬಹುದು. ಆದರೆ ಯಾವುದೋ ಒಂದು ನಿರ್ದಿಷ್ಟ ಸಮಾಜದ ಅವಶ್ಯಕತೆಯ ಅಥವ ಅನುಕೂಲತೆಯ ದೃಷ್ಟಿಯಿಂದ ಶಿಕ್ಷಣಕ್ರಮವನ್ನು ಯೋಜಿಸಿದಾಗ ಅಲ್ಪಸಂಖ್ಯಾತರ ಸಾಹಿತ್ಯಾಭಿರುಚಿಗೆ ಪ್ರಾಮುಖ್ಯತೆ ಕೊಡಕೂಡದು. ಈಗ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ವಿನಿಯೋಗಿಸುವ ಕಾಲ ಮತ್ತು ದ್ರವ್ಯವನ್ನು ಕಡಮೆಮಾಡಬೇಕು. ಕಡಮೆಕಾಲದಲ್ಲಿ ಸುಲಭ ವೆಚ್ಚದಲ್ಲಿ ಸಾಹಿತ್ಯಾನಂದವನ್ನು ಅನುಭವಿಸಬಹುದು. ಪ್ರಪಂಚದಲ್ಲಿ ಸುಂದರವಾದ ಎಷ್ಟೋ ಅಮೂಲ್ಯ ರತ್ನಗಳಿವೆ. ಅವೆಲ್ಲಾ ಇಂಗ್ಲಿಷ್ ಕಟ್ಟಡಗಳಲ್ಲೇ ಅಡಕವಾಗಿಲ್ಲ. ಅಂತೆಯೇ ಇಂಗ್ಲಿಷ್ ಸಾಹಿತ್ಯಕ್ಕೆ ಸರಿಮಿಗಿಲಾದ ಎಷ್ಟೋ ಕಾವ್ಯರತ್ನಗಳು ಇತರ ಭಾಷೆಗಳಲ್ಲೂ ಇವೆ. ಇದರ ಸಾರವು ನಮ್ಮ ಜನಸಾಮಾನ್ಯರಿಗೆ ಒದಗುವಂತಾಗಬೇಕು. ವಿದ್ಯಾವಂತರು ನಮ್ಮ ಜನಸಾಮಾನ್ಯರಿಗಾಗಿ ಅವುಗಳನ್ನು ಮಾತೃಭಾಷೆಗೆ ಭಾಷಾಂತರಿಸುವ ಕಾರ್ಯವನ್ನು ಕೈಗೊಳ್ಳಬೇಕು.

ತಂದೆತಾಯಿಗಳು ತಮ್ಮ ಹೆಣ್ಣುಮಕ್ಕಳು ಕೇವಲ ಆಟದ ಬೊಂಬೆಗಳಾಗಲಿ ಎಂಬ ಉದ್ದೇಶದಿಂದ ಅವರನ್ನು ಶಾಲಾ ಕಾಲೇಜುಗಳಿಗೆ ಕಳುಹಿಸುವುದಿಲ್ಲ. ಅವರು ವಿದ್ಯಾವತಿಯರಾಗಿ, ದಯಾವತಿಯರಾಗಿ, ತಾವು ಕಲಿತ ವಿದ್ಯೆಯ ಸದುಪಯೋಗ ಪಡೆಯಲೆಂಬ ಉದ್ದೇಶದಿಂದ ಕಳುಹಿಸುತ್ತಾರೆ. ಹೆಣ್ಣುಮಕ್ಕಳು ತಾವು ವಿದ್ಯೆ ಕಲಿತದಕ್ಕೆ ತಮ್ಮ ಕೈಲಾದ ಮಟ್ಟಿಗೆ ಪರರಿಗೆ ಉಪಕಾರ ಮಾಡಬೇಕು. ಇಲ್ಲದಿದ್ದರೆ ಅವರ ವಿದ್ಯೆಯಿಂದ ಏನೂ ಪ್ರಯೋಜನವಿಲ್ಲ. ಸ್ವಾರ್ಥದ ಕಡೆಗೆ ಗಮನ ಕೊಡದೆ ತಮಗಿಂತ ಬಡವರಾದವರ ಮತ್ತು ತಮಗಿಂತ ಹೀನಸ್ಥಿತಿಯಲ್ಲಿರುವವರ ವಿಷಯವಾಗಿ ಸಹಾನುಭೂತಿ

ಯಿಂದ ವರ್ತಿಸುವುದನ್ನು ವಿದ್ಯಾರ್ಥಿನಿಯರು ಕಲಿಯಬೇಕು. ಸಾಧ್ಯವಾದಾಗ ಲೆಲ್ಲಾ ನಿಧಿಯನ್ನು ಸಂಗ್ರಹಿಸಿ ಆ ಹಣವನ್ನು ದೀನದಲಿತರ ಸೇವೆಗೆ ಉಪ ಯೋಗಿಸಬೇಕು.

ನಿಧಿ ಸಂಗ್ರಹಮಾಡುವುದು ಯಾರಿಗಾದರೂ ಅಷ್ಟೇನೂ ಕಷ್ಟವಾಗು ವುದಿಲ್ಲ. ಏನೋ ಚಂದಾ ಕೇಳುತ್ತಿದ್ದಾರೆಂದು ಕೈಲಾದಷ್ಟು ದ್ರವ್ಯವನ್ನು ಕೊಟ್ಟು ತಲೆ ತಪ್ಪಿಸಿಕೊಳ್ಳುವುದೂ ಕಷ್ಟವಲ್ಲ. ಆದರೆ ಕೂಡಿಸಿದ ಹಣ ವನ್ನಿಟ್ಟುಕೊಂಡು ಅದರಿಂದ ಉಪಯೋಗಕರವಾದ ಕೆಲಸ ಮಾಡುವುದು ತಾನೆ ಸ್ವಲ್ಪ ಕಷ್ಟ. ದರಿದ್ರನಾರಾಯಣರ ಸೇವೆಗಾಗಿ ಕರುಣೆಯಿಂದ ಹಣ ಕೊಟ್ಟವರು ಅವರಲ್ಲಿ ಹೆಚ್ಚು ಸಂಪರ್ಕವನ್ನು ಬೆಳೆಸಲು ಅವರಿಂದ ತಯಾರಾದ ಖಾದಿಯನ್ನು ಧರಿಸಬೇಕು. ಖಾದಿಯನ್ನು ಕೊಳ್ಳುವುದರ ಮೂಲಕ ಬಡಜನರಿಗೆ ಉತ್ತೇಜನ ಕೊಡಬೇಕು. ಖಾದಿ ಮಾರಾಟಕ್ಕೆ ಸಹಕರಿಸಬೇಕು. "ಖಾದಿ ಶುದ್ಧ ಒರಟು. ನಾವು ಅದನ್ನು ಉಡುವುದಕ್ಕೆ ಆಗುವುದಿಲ್ಲ"ವೆಂದು ಹೇಳಿದರೆ ವಿದ್ಯಾರ್ಥಿನಿಯರಿಗೆ ತಕ್ಕಷ್ಟು ತ್ಯಾಗಬುದ್ಧಿ ಬಂದಿಲ್ಲವೆಂದು ಅರ್ಥವಾಗುತ್ತವೆ.

ವಿದ್ಯಾಸಂಸ್ಥೆಗಳಲ್ಲಿ ಬಡವರು, ಬಲ್ಲಿದರು, ಉತ್ತಮರು, ಅಧಮರು, ಸ್ಪೃಶ್ಯ, ಅಸ್ಪೃಶ್ಯ ಎಂಬ ಭೇದಭಾವನೆಗಳಿಗೆ ಎಡೆಗೊಡಬಾರದು. ವಿದ್ಯಾರ್ಥಿನಿ ಯರ ಮನಸ್ಸಿನಲ್ಲಿ ಆ ಹುಡುಗಿಯರಿಗಿಂತ ನಾವು ಮೇಲು ಎಂಬ ಭೇದ ಭಾವನೆ ಬಾರದಿದ್ದರೆ ಬಹಳ ಒಳ್ಳೆಯದು. ಆಗ ಅವರ ಮನಸ್ಸು ದೀನದಲಿತರಿ ಗಾಗಿ ಕೆಲಸಮಾಡಲು ಸಹಾನುಭೂತಿ ತೋರಿಸುತ್ತದೆ. ವಿದ್ಯಾರ್ಥಿನಿಯರು ವರುಷದಲ್ಲಿ ಒಂದು ದಿನವನ್ನು ನಿಧಿ ಸಂಗ್ರಹಕಾರ್ಯಕ್ಕೋಸ್ಕರ ಮೀಸ ಲಾಗಿಡಬೇಕು. ಸಂಗ್ರಹಿಸಿದ ಹಣವನ್ನು ಖಾದಿ ಕೆಲಸಕ್ಕೆ ಉಪಯೋಗಿಸ ಬೇಕು. ಆ ಕೆಲಸವನ್ನು ಬಹಳ ಶ್ರದ್ಧೆಯಿಂದ ನೆರವೇರಿಸಬೇಕು. ಕೋಟ್ಯಾಂತರ ದರಿದ್ರನಾರಾಯಣರು ವಿದ್ಯಾವತಿಯರಾದ ಸೋದರಿಯರ ನೆರವನ್ನು ನಿರೀಕ್ಷಿಸುತ್ತಾರೆ. ಅವರ ದಾರುಣಸ್ಥಿತಿಯ ಅರಿವನ್ನುಂಟುಮಾಡಿಕೊಂಡು ಅವರಿಗೆ ಸಹಾಯಮಾಡಿದರೆ ವಿದ್ಯೆಯಿಂದ ನಿಜವಾದ ಫಲ ದೊರೆಯುತ್ತದೆ.

ಬಡಜನರಿಗಾಗಿ ನಾವು ಏನು ಮಾಡಬಹುದು? ಎಂಬ ಪ್ರಶ್ನೆ ಹಾಕಿ ಅವರ ವಿಚಾರವಾಗಿ ಯೋಚಿಸಬೇಕು. ಚರಕದಿಂದಲೇ ಅವರಿಗೆ ಮುಕ್ತಿ ಎಂಬ ವಿಚಾರವನ್ನರಿತು ಅದರ ಮೂಲಕ ಬಡವರ ಉದ್ಧಾರಕ್ಕೆ ಪ್ರಯತ್ನಪಡ ಬೇಕು. ವಿದ್ಯಾಸಂಸ್ಥೆಗಳಲ್ಲಿ ಧಾರ್ಮಿಕಶಿಕ್ಷಣ ತಕ್ಕಷ್ಟು ದೊರೆಯಬೇಕು. ಆದರೆ ಶ್ರದ್ಧೆಯಿಲ್ಲದ ಪೂಜೆ ಆಡಂಬರದ ಪ್ರದರ್ಶನವಾಗುತ್ತದೆಯೇ ಹೊರತು

ಅದರಿಂದ ಏನೇನೂ ಲಾಭವಿಲ್ಲ. ನಿಜವಾದ ಪೂಜೆಯೆಂದರೆ ದರಿದ್ರನಾರಾಯಣ ಸೇವೆ. 'ಜನಸೇವೆಯೇ ಜನಾರ್ದನ ಸೇವೆ.' ಈ ಪೂಜೆ ಮಾಡುವುದು ಹಣ್ಣು ಕಾಯಿಗಳ ಧೂಪದೀಪಗಳ ಮೂಲಕವಲ್ಲ. ಇದನ್ನು ಮಾಡುವುದು ಚರಕದ ಮೂಲಕ. ದಿನವೂ ಅರ್ಧ ಗಂಟೆಯಹೊತ್ತು ಚರಕದ ಮುಂದೆ ಕೂತು ನಮ್ಮ ದೇಶದಲ್ಲಿರುವ ಬಡವರನ್ನು ಸ್ಮರಿಸಿಕೊಂಡು ಅವರ ಹೆಸರಿನಲ್ಲಿ ಅವರ ಸೇವೆಗಾಗಿ ನಾನು ನೂಲು ತೆಗೆಯುತ್ತೇನೆಂದು ಕೆಲಸ ಮಾಡಬೇಕು. ಈ ಕೆಲಸ ಮಾಡು ವಾಗ ನಿಜವಾದ ಶ್ರದ್ಧಾ ಭಕ್ತಿಗಳಿರಬೇಕು. ನಾವು ಉಡುಪು ಧರಿಸುವುದು ಅಲಂಕಾರಕ್ಕಲ್ಲ ದೇಹವನ್ನು ಮುಚ್ಚುವುದಕ್ಕಾಗಿ ಎಂಬ ಭಾವನೆಯಿಂದ ಬಟ್ಟೆ ಹಾಕಿದರೆ ಖಾದಿ ಧರಿಸಲು ಸಂಕೋಚವಾಗುವುದಿಲ್ಲ.

ನಮ್ಮ ಭಾರತದೇಶದಲ್ಲಿ ಬಡವರ ಸಂಖ್ಯೆ ಹೆಚ್ಚು. ಅವರ ಆದಾಯ ತೀರ ಕಡಮೆ. ಅವರ ಆದಾಯ ಹೆಚ್ಚಿಸುವ ಒಂದೇ ಒಂದು ದಾರಿಯೆಂದರೆ ಚರಕ. ಆ ಚರಕ ಸ್ತ್ರೀಯರಿಗೆ ಸುಖಸಂತೋಷಗಳನ್ನು ಉಂಟುಮಾಡುವ ಸಾಧನ. ಬಡವರು ಚರಕದಿಂದ ನೂಲು ತೆಗೆದು ಬಟ್ಟೆ ತಯಾರಿಸಿದರೆ ಅನು ಕೂಲಸ್ಥರು ಅವನ್ನು ಕೊಳ್ಳದಿದ್ದರೆ ಆ ಕೆಲಸ ಮುಂದುವರಿಯುವುದಿಲ್ಲ. ವಿದ್ಯಾರ್ಥಿನಿಯರು ಮನಸ್ಸುಮಾಡಿದರೆ ಆ ಕೆಲಸ ಸುಸೂತ್ರವಾಗಿ ಮುಂದು ವರಿಯುತ್ತದೆ. ವಿದ್ಯಾರ್ಥಿನಿಯರು ಖಾದಿ ಧರಿಸುತ್ತೇವೆಂಬ ನಿರ್ಧಾರದಿಂದ ಕೊಳ್ಳುವ ಪ್ರತಿಯೊಂದು ಗಜ ಬಟ್ಟೆಯೂ ಬಡ ಕೂಲಿಗಾರ ಹೆಂಗಸರಿಗೆ ನಾಲ್ಕು ತಾಮ್ರದ ದುಡ್ಡನ್ನು ಒದಗಿಸುತ್ತದೆ. ಇದರಿಂದ ದೇಶದ ಆರ್ಥಿಕ ಮುಗ್ಗಟ್ಟು ಪರಿಹಾರವಾಗಲು ಸಹಾಯವಾಗುವುದಲ್ಲದೆ ನಿರುದ್ಯೋಗಿಗಳಿಗೆ ಉದ್ಯೋಗ ದೊರೆಯುವಂತಾಗುತ್ತದೆ. ಹಸಿವಿನ ಉರಿಯನ್ನು ಆರಿಸಲು ಚರಕ ಮತ್ತು ಕೈಮಗ್ಗ ಉತ್ತಮ ಗೃಹಕೈಗಾರಿಕೆಯಾಗುತ್ತದೆ.

ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದ ಮಹನೀಯರು ತೋರಿಸಿದ ಆದರ ಆಸಕ್ತಿಗಳಿಗೆ ವಿದ್ಯಾರ್ಥಿನಿಯರು ಯೋಗ್ಯರೆನಿಸಬೇಕಾದರೆ ಅವರು ಸಾರ್ವ ಜನಿಕ ಕ್ಷೇತ್ರದಲ್ಲಿ ದುಡಿಯಬೇಕು. ವಿದ್ಯಾಸಂಸ್ಥೆಗಳಿಂದ ಹೊರಬಿದ್ದ ಕೂಡಲೇ ವಿದ್ಯಾರ್ಥಿನಿಯರು ಸೂತ್ರದ ಬೊಂಬೆಗಳಾಗಿ ಜನಜೀವನದಿಂದ ದೂರ ಸರಿದರೆ ವಿದ್ಯೆ ಕಲಿಸಿದ್ದಕ್ಕೆ ತಕ್ಕ ಪ್ರತಿಫಲ ಬಂದಂತಾಗಲಿಲ್ಲ. ಭಾರತೀಯರಲ್ಲಿ ಪ್ರತಿಯೊಬ್ಬ ಹುಡುಗಿಯೂ ಮದುವೆಗಾಗಿಯೇ ಹುಟ್ಟಲಿಲ್ಲ. ಒಬ್ಬ ಮನು ಷ್ಯನ ಅಥವ ಒಂದು ಕುಟುಂಬದ ಸೇವೆ ಮಾಡುವುದಕ್ಕಿಂತ ವಿಶ್ವಕುಟುಂಬದ ಸೇವೆಗಾಗಿ ದೀಕ್ಷೆ ತೆಗೆದುಕೊಂಡ ಹುಡುಗಿಯರು ಎಷ್ಟೋ ಜನ ಇದ್ದಾರೆ. ಹಿಂದೂ ವಿದ್ಯಾರ್ಥಿನಿಯರು ಪಾರ್ವತಿ ಸೀತಾದೇವಿಯರಂತೆ ಆದರ್ಶಸತಿಯ

ರಾಗಿ ಬಾಳಬೇಕು. ಪಾರ್ವತಿಗೆ ಯಾವ ವಿಶ್ವವಿದ್ಯಾನಿಲಯದ ಪ್ರಶಸ್ತಿಯೂ ಇರಲಿಲ್ಲ. ಆದರೆ ಅವಳ ಹೆಸರು ಅಜರಾಮರವಾಗಿ ವಿರಾಜಿಸುತ್ತಿರುವುದು. ಅವಳು ಶಿವನನ್ನು ಸಾಕ್ಷಾತ್ಕರಿಸಿಕೊಳ್ಳಲು ಮಾಡಿದ ಕಠಿಣ ತಪಸ್ಸಿನಿಂದ.

ಭಾರತದೇಶದಲ್ಲಿ ಅಲ್ಲಲ್ಲಿ ದುಷ್ಟ ವರದಕ್ಷಿಣೆ ಪದ್ಧತಿ ರೂಢಿಯಲ್ಲಿದೆ. ಇದರಿಂದ ವಯಸ್ಸಿಗೆ ಬಂದ ಹುಡುಗಿಯರಿಗೆ ಯೋಗ್ಯನಾದ ವರನು ಸಿಕ್ಕುವುದು ಕಷ್ಟ. ವಯಸ್ಸಿಗೆ ಬಂದ ಹುಡುಗಿಯರು ವರನನ್ನು ಕೊಳ್ಳುವ ಈ ದುಷ್ಟಪದ್ಧತಿಯನ್ನು ಪ್ರತಿಭಟಿಸಿ ನಿಲ್ಲಬೇಕು. ಇದರಿಂದ ಕೆಲವರಿಗೆ ಆಜೀವ ವಿವಾಹವಿಲ್ಲದೆ ಕಾಲಕಳೆಯಬೇಕಾದ ಪ್ರಸಂಗ ಬರುತ್ತದೆ. ಅಲ್ಪಸ್ವಲ್ಪ ಜನರಿಗೆ ತೊಂದರೆಯಾದರೂ ಈ ಸಾಮೂಹಿಕ ಚಳುವಳಿಯಿಂದ ಅನೇಕರ ಹಿತರಕ್ಷಣೆಯಾಗುತ್ತದೆ. ದುಡ್ಡು, ಯಶಸ್ಸು ಬಾಹ್ಯ ಸೌಂದರ್ಯಗಳಿಗೆ ಮರುಳಾಗದ ವರನನ್ನು ಆರಿಸಲು ಅನುಕೂಲವಾಗುತ್ತದೆ. ವರದಕ್ಷಿಣೆ ಕೊಡಲು ಅನುಕೂಲವಿದ್ದವರು ಸಹ ಅದನ್ನು ವಿರೋಧಿಸಬೇಕು. ಪಾರ್ವತಿಯು ತನ್ನ ಪತಿಯನ್ನು ವರಿಸುವಾಗ ಗಂಡನಿಗಾಗಿ ಧನವನ್ನು ವೆಚ್ಚಮಾಡಲಿಲ್ಲ. ತನ್ನನ್ನು ಮಾರಲು ಅವಕಾಶ ಕೊಡಲಿಲ್ಲ.

ಸ್ವದೇಶಿ ಕಾರ್ಯವು ಮುಂದುವರಿಯಬೇಕಾದರೆ ಖಾದಿಯನ್ನು ತೊಡುವುದರಿಂದ ಮಾತ್ರವೇ ಮುಗಿದಂತಾಗುವುದಿಲ್ಲ. ಎಲ್ಲಾ ವಿದೇಶಿ ವಸ್ತ್ರಗಳನ್ನು ತ್ಯಾಗಮಾಡಬೇಕು. ತಾಯಿ ಕುರೂಪಿಯಾಗಿದ್ದರೂ ತಾನು ಹೆತ್ತಮಗುವನ್ನು ಮುದ್ದಾಡುವಂತೆ ಸ್ತ್ರೀಯರು ಭಾರತದಲ್ಲಿ ತಯಾರಾಗುವ ಬಟ್ಟೆಯಿಂದಲೇ ತೃಪ್ತರಾಗಬೇಕು. ಭಾರತದಲ್ಲಿ ತಯಾರಾಗುವ ವಸ್ತುಗಳ ಮೇಲೂ ದೇಶವತ್ಸಲರಾದ ವಿದ್ಯಾರ್ಥಿನಿಯರು ಮಮತೆ ಇಡಬೇಕು. ನೂಲುವುದು ಜೀವನೋಪಾಯದ ಮಾರ್ಗ ಎಂಬ ದೃಷ್ಟಿ ಶ್ರೀಮಂತರಿಗಿರಕೂಡದು. ಮಧ್ಯಮ ವರ್ಗದವರಿಗೆ ಅದು ಅವರ ವರಮಾನಕ್ಕೆ ಪೂರಕ ಎಂಬ ದೃಷ್ಟಿಯಿರಬೇಕು. ತೀರ ಬಡವರಿಗೆ ಅದು ಅನ್ನದ ದಾರಿ ಎಂಬ ಅಭಿಮಾನವಿರಬೇಕು. ಚರಕ ವಿದ್ಯಾರ್ಥಿನಿಯರಿಗೆ ಧರ್ಮವಾಗಿ ಕರ್ತವ್ಯವಾಗಿ ಆಚರಣೆಯಲ್ಲಿರಬೇಕು.

ಭಾರತದ ಆರ್ಥಿಕ, ನೈತಿಕ ಉನ್ನತಿ ಮುಖ್ಯವಾಗಿ ಮಹಿಳೆಯರನ್ನೇ ಅವಲಂಬಿಸಿದೆ. ಭಾರತದ ಭಾವೀಜನಾಂಗದ ಪೋಷಕರು ಇಂದಿನ ವಿದ್ಯಾರ್ಥಿನಿಯರು. ಅವರು ಭಾರತದ ಮುಂದಿನ ಸಂತಾನವನ್ನು ಸರಳಜೀವಿಗಳೂ ಪಾಪಭೀರುಗಳೂ ಆದ ಸತ್ಪ್ರಜೆಗಳನ್ನಾಗಿ ಮಾಡುವ ಹೊಣೆಗಾರಿಕೆಯನ್ನು ಹೊರಬೇಕು. ಜೀವನದ ಬಿರುಗಾಳಿಯ ಹೊಡೆತವನ್ನು ತಾಳುವ ಶಕ್ತಿಸಹನೆಗಳನ್ನು ಮಕ್ಕಳಲ್ಲಿ ಬೆಳೆಸುವುದು ಭಾರತದ ವಿದ್ಯಾರ್ಥಿನಿಯರ ಕೈಯಲ್ಲಿದೆ.

ಹೆಂಗಸಿಗೆ ಆಭರಣದ ವ್ಯಾಮೋಹ ಹೆಚ್ಚು. ಸ್ತ್ರೀಯರ ನಿಜವಾದ ಆಭರಣ ಆಕೆಯ ಶೀಲ ಮತ್ತು ಹೃದಯ ಪರಿಶುದ್ಧತೆ. ದೇಹವನ್ನು ಲೋಹದಿಂದ ಮತ್ತು ಕಲ್ಲುಗಳಿಂದ ಮುಚ್ಚುವುದು ನಿಜವಾದ ಅಲಂಕಾರವಲ್ಲ; ಮನಸ್ಸು ಶುದ್ಧವಾಗಿ ಆತ್ಮತೇಜಸ್ಸಿನಿಂದ ಬೆಳಗುವುದು ನಿಜವಾದ ಅಲಂಕಾರ. ಸ್ತ್ರೀಯರು ತಮ್ಮ ಆಭರಣಗಳನ್ನು ಬಡವರ ಉದ್ಧಾರಕ್ಕಾಗಿ ದಾನಮಾಡುವುದನ್ನು ಸಾಮಾಜಿಕ ಕರ್ತವ್ಯವೆಂದು ಭಾವಿಸಬೇಕು.

ಹರಿಜನರ ಉದ್ಧಾರಕಾರ್ಯ ವಿದ್ಯಾರ್ಥಿನಿಯರಿಂದಾಗಬೇಕು. ಅಸ್ಪೃಶ್ಯತೆಯನ್ನು ಹೃದಯದಿಂದ ಕಿತ್ತೊಗೆಯಬೇಕು. ಸ್ತ್ರೀಯು ಸೇವೆ ಮತ್ತು ತ್ಯಾಗದ ಮೂರ್ತಿಯಾಗಿದ್ದಾಳೆ. ಪರರ ಸಂಕಟವನ್ನು ನೋಡಿ ಹೆಂಗಸಿನ ಕರುಳು ಕರಗುತ್ತದೆ. ಹೆಂಗಸರು ಅಸ್ಪೃಶ್ಯರ ಗೋಳನ್ನು ಕೇಳಿ ಸಹಾನುಭೂತಿ ತೋರಿಸಬೇಕು. ಅಸ್ಪೃಶ್ಯತೆ ತೊಲಗಿದರೆ ಹಿಂದೂಧರ್ಮ ಪವಿತ್ರವಾಗಿ ಭಾರತದ ಕಲ್ಯಾಣವಾಗುತ್ತದೆ.

ವಿದ್ಯೆಯ ನಿಜವಾದ ಉಪಯೋಗವನ್ನು ಮಾಡಿಕೊಳ್ಳಬೇಕಾದರೆ ವಿದ್ಯಾರ್ಥಿನಿಯರು ತಮ್ಮ ವ್ಯಾಸಂಗ ಮುಗಿದಕೂಡಲೇ ಸಾರ್ವಜನಿಕ ಕ್ಷೇತ್ರದಿಂದ ಕಣ್ಮರೆಯಾಗಿ ಬೊಂಬೆಗಳ ರಾಜ್ಯಕ್ಕೆ ಸೇರುವುದನ್ನು ಬಿಡಬೇಕು. ಸ್ತ್ರೀಯು ತನ್ನ ಆಟದ ಬೊಂಬೆ ಎಂಬ ಭಾವನೆಯು ಪುರುಷರ ಮನಸ್ಸಿನಲ್ಲಿ ಬೆಳೆಯುವುದಕ್ಕೆ ಅವಕಾಶಕೊಡದೆ ಆಕೆ ತನ್ನ ಸಹಧರ್ಮಿಣಿ, ಜೀವನದ ಸಂಗಾತಿ ಎಂಬ ಭಾವನೆ ಬರುವಂತೆ ತನ್ನ ಮೂಲಭೂತ ಹಕ್ಕುಗಳನ್ನು ಸ್ಥಾಪಿಸಬೇಕು. ಪಾರ್ವತಿ, ದಮಯಂತಿ, ಸೀತೆ, ಸಾವಿತ್ರಿಯರಂತೆ ಆದರ್ಶ ಸತಿಯರಾಗಬೇಕು. ಸತ್ಯ, ಅಹಿಂಸೆ, ಬಡಜನರ ಉದ್ಧಾರ, ಹರಿಜನರ ಉದ್ಧಾರ ಸ್ವಾವಲಂಬನೆ— ಇವೆ ಮಹಾತ್ಮರು ಎಲ್ಲಾ ಜನರಿಗೂ ಹೇಳಿಕೊಡುತ್ತಿದ್ದ ಪಾಠ. ಖಾದಿಯೇ ಬಡವರ ಉದ್ಧಾರದ ಹಾದಿಯೆಂದೂ, ಕೈರಾಟೆಯೇ ಸ್ವರಾಜ್ಯ ಸಂಪಾದನೆಯ ಆಯುಧವೆಂದೂ ಸಾರಿ ಸಾರಿ ಹೇಳುತ್ತಿದ್ದರು. ಸ್ವಾವಲಂಬನೆಯ ನೀತಿಯನ್ನು ಅನುಸರಿಸಿದ ಹೊರತು ಭಾರತೀಯರಿಗೆ ದಾಸ್ಯದಿಂದ ವಿಮೋಚನೆಯಿಲ್ಲವೆಂದು ಹೇಳುತ್ತಿದ್ದರು. ಮಹಾತ್ಮರು ತೋರಿಸಿಕೊಟ್ಟ ಈ ಆದರ್ಶಗಳ ಬೆಳಕಿನಲ್ಲಿ ಮುಂದುವರಿದರೆ ಕಲಿತ ವಿದ್ಯೆಗೂ ಕಲಿಸಿದ ವಿದ್ಯಾಸಂಸ್ಥೆಗೂ ಕೀರ್ತಿ ಬರುತ್ತದೆ. ಮಹಾತ್ಮರ ಬುದ್ಧಿವಾದ ವಿದ್ಯಾರ್ಥಿನಿಯರಿಗೆ ಮಾರ್ಗದರ್ಶಕವಾಗಿ ಚಿರಕಾಲ ಬೆಳಗಲಿ.

# ವೈಷ್ಣವಜನತೋ

ವೈಷ್ಣವ ಜನತೋ ತೇನೆ ಕಹಿ ಯೇ ಜೇ ಪೀಡ ಪರಾಯೀ ಜಾಣೇ ರೇ
ಪರದುಃಖೇ ಉಪಕಾರ ಕರೇ ತೋಯೇ, ಮನ್ ಅಭಿಮಾನ ನ ಆಣೆ ರೇ

ಸಕಲ ಲೋಕಮಾಂ ಸಹುನೇ ವಂದೇ, ನಿಂದಾ ನ ಕರೇ ಕೇನೀ ರೇ ;
ವಾಚ ಕಾಚ್ ಮನ್ ನಿಶ್ಚಲ ರಾಖೇ, ಧನ್‌ಧನ್ ಜನನೀ ತೇನೀ ರೇ ‖ವೈ‖

ಸಮದೃಷ್ಟಿ ನೇ ತೃಷ್ಣಾ ತ್ಯಾಗೀ, ಪರಸ್ತ್ರೀ ಜೇನೇ ಮಾತ ರೇ ;
ಜಿಹ್ವಾ ಥಕೀ ಅಸತ್ಯ ನ ಬೋಲೇ, ಪರಧನ್ ನವ ಝಾಲೇ ಹಾಥ ರೇ ‖ವೈ‖

ಮೋಹ ಮಾಯಾ ವ್ಯಾಪೇ ನಹಿ ಜೇನೇ, ದೃಢವೈರಾಗ್ಯ ಜೇನಾ
ಮನಮಾಂ ರೇ ;
ರಾಮನಾಮಶುಂ ತಾಳೀ ಲಾಗೀ, ಸಕಳ ತಿರಥ್ ತೇನಾ ತನಮಾಂ ರೇ ‖ವೈ‖

ವಣಲೋಭೀ ನೇ ಕಪಟರಹಿತ ಛೇ, ಕಾಮ ಕ್ರೋಧ ನಿವಾರ್ಯಾ ರೇ ;
ಭಣೇ ನರಸೈಂಯೋ ತೇನುಂ ದರಸನ್ ಕರತಾಂ, ಕುಳ್ ಏಕೋ ತೇರ
ತಾರ್ಯಾಂ ರೇ ‖ವೈ‖

17/33, "RAJARAM COTTAGE"
Kanakapura Road,
Basavangudi Bangalore-560 004

Collection of Talks Poems and Features Broadcast from Akashvani during the GANDHI JAYANTHI WEEK. October, 1948.

*Sarvodaya, 1949*



*An AKV. Publication*
**Price, Re. 1-4.**

